ಗೊಂದಾವಲಿಯ

# ಶ್ರೀ ಬ್ರಹ್ಮಚೈತನ್ಯ ಮಹಾರಾಜರ ಚರಿತ್ರ.




ಲೇಖಕ ಮತ್ತು ಪ್ರಕಾಶಕ:—

ರಾಮಚಂದ್ರ ತ್ರ್ಯಂಬಕ ಕರ್ಪೂರ,

ಮ್ಯಾನೇಜರ, ಸ. ಚ., ಆನಂದವನ.





೧೯೨೮.


ಬೆಲೆ ೧೨ ಆಣೆ.] [ಟ. ಖ. ಬೇರೆ.

# ವಿಷಯಾನುಕ್ರಮಣಿಕೆ.



ಗೊಂದಾವಲಿಯ

# ಶ್ರೀ ಬ್ರಹ್ಮಚೈತನ್ಯ ಮಹಾರಾಜರ ಚರಿತ್ರೆ.

## ೧ನೆಯ ಅಧ್ಯಾಯ:—ಸತ್ಕರ್ಮ ಪ್ರಧಾನ.




ಸತ್ಕರ್ಮವು ಮನುಷ್ಯನಿಗೆ ಕಾಮಧೇನು ಸಮಾನ ವಾದದ್ದು. ಯಾವನು ಸರ್ವದಾ ಸತ್ಕರ್ಮಗಳಲ್ಲಿ ರತನಾಗಿರುವನೋ, ದುಷ್ಕರ್ಮಗಳ ಕಡೆಗೆ ಕಣ್ಣೆತ್ತಿ ಕೂಡಾ ನೋಡಲಾರನೋ, ಅತನನ್ನು ದುಃಖ ವೆಂಬ ರಾಕ್ಷಸನು ಮುಟ್ಟಲಾರನು. ಮಾತ್ರ ಅವನ ಆ ಸತ್ಕರ್ಮವು ಪರಮೇಶ್ವರನ ಪ್ರಸನ್ನತೆಗೆ ಕಾರಣವಾಗಿರಬೇಕು. ತ್ರಿಕರಣಪೂರ್ವಕವಾಗಿ ಆಚರಿಸಲ್ಪಡುವ ಸತ್ಕರ್ಮವು ಪರಮೇಶ್ವರನ ಪ್ರೀತಿಗೆ ಅರ್ಹವಾದಂತೆ ಡಾಂಭಿಕ ಸತ್ಕರ್ಮವು ಆಗಲಾರದು. ಡಾಂಭಿಕತನದಿಂದ ಮಾಡಿದ ಸತ್ಕರ್ಮಕ್ಕೆ ಸತ್ಕರ್ಮವೆಂಬ ಹೆಸರೂ ಒಪ್ಪಲಾರದು.

ಸತ್ಕರ್ಮಶೀಲರು ದೈವೀತೇಜಸ್ಸಿನಿಂದ ಯುಕ್ತರಾಗಿರುವರು. ಈಶ್ವರನೇ ಅವರ ಕೈವಾರಿಯಾಗಿರುವದರಿಂದ ಅವರಿಗೆ ಯಾವಬಗೆಯ ಕೊರತೆ ಉಂಟಾಗದು. ಅವರ ಮನಸ್ಸಿನಲ್ಲಿ ಇಚ್ಛೆಗಳುಂಟಾಗುವದೊಂದೇ ತಡ; ಅವು ಕೂಡಲೆ ಸಿದ್ಧಿಯಾಗುವವು. ಪುರಾಣಗಳಲ್ಲಿ ಇಂಥ ಸತ್ಕರ್ಮಶೀಲರ ಉದಾಹರಣೆಗಳು ಹೇರಳವಾಗಿ ದೊರೆಯುವವಲ್ಲದೆ, ಆಧುನಿಕ ಕಾಲದಲ್ಲಿಯೂ ಹೇರಳವಾಗಿ ಸಿಕ್ಕುವವು. ಕಲಿ ಮಹಿಮೆಯಿಂದ ಈಗ ಧರ್ಮವು ಲುಪ್ತಪ್ರಾಯವಾದರೂ, ನಿಜವಾದ ಸತ್ಕರ್ಮಶೀಲರು ತಮ್ಮ ಪ್ರಭಾವದಿಂದ ಪ್ರಭುವಾದ ಶ್ರೀ ಪರಮೇಶ್ವರನ ಒಲುಮೆಯನ್ನು ಸಂಪಾದಿಸುತ್ತಲೇ ಇರುವರು. ಇಂಥ ಸತ್ಕರ್ಮಶೀಲರ ಹೊಟ್ಟೆಯಲ್ಲಿ ಪರಮಾತ್ಮನೇ ಅವತರಿಸಿ ಬರುವನೆಂದ ಬಳಿಕ ಅವರ ಭಾಗ್ಯವನ್ನಿನ್ನೇನು ಬಣ್ಣಿಸಬೇಕು? ಶ್ರೀ ಸಮರ್ಥ ರಾಮದಾಸರ ಜನಕರಾದ ಶ್ರೀ ಸೂರ್ಯಾಜಿಪಂತರೂ, ಶ್ರೀ ಚಿದಂಬರ ಮಹಾಸ್ವಾಮಿಯ ಜನಕರಾದ ಶ್ರೀ ಮಾರ್ತಂಡ ದೀಕ್ಷಿತರೂ, ಶ್ರೀ ಶೇಷಾಚಲ ಸದ್ಗುರುಗಳ ಜನಕರಾದ ಶ್ರೀ ರಾಮಭಟ್ಟರು ಸತ್ಕರ್ಮಶೀಲರೇ ಆಗಿದ್ದರು. ಅವರ ಸತ್ಕರ್ಮವು ಪರಮೇಶ್ವರನ ಮೆಚ್ಚುಗೆಗೆ ಪಾತ್ರವಾಗಿತ್ತು. ಅದರಂತೆ ಪ್ರಸ್ತುತ ಚರಿತ್ರನಾಯಕರಾದ ಶ್ರೀ ಬ್ರಹ್ಮಚೈತನ್ಯಮಹಾರಾಜರವರ ಜನಕರೂ ಅಜ್ಜಂದಿರೂ ಅತ್ಯಂತ ಸತ್ಕರ್ಮಶೀಲರಾಗಿದ್ದರು. ಅಂತೆಯೇ ಅವರ ಪುಣ್ಯೋದರದಲ್ಲಿ ಶ್ರೀ ಮಾರುತಿಯ ಅಂಶಾವತಾರಿಕರಾದ ಶ್ರೀ ಬ್ರಹ್ಮಚೈತನ್ಯಮಹಾರಾಜರು ಜನಿಸಿದರು! ಅಹಾ! ಸತ್ಕರ್ಮಶೀಲರ ಪ್ರಭಾವವೆಷ್ಟು? ಅವರು ದೇವರನ್ನೇ ತಮ್ಮ ಮನೆಯಲ್ಲಿ ಅಂಬೇಗಾಲಿನಿಂದ ಆಡಹಚ್ಚುವರಲ್ಲ!! ಧನ್ಯವು ಇಂಥವರ ಸತ್ಕರ್ಮವು!!! ಇಂಥ ಪವಿತ್ರ ಸತ್ಕರ್ಮಶೀಲರ ಪ್ರಭಾವವು ಜಗತ್ತನ್ನೇ ದಂಗುಬಡಿಸುವದು! ನಮ್ಮ ವಾಚಕರಿಗೆ ಸತ್ಕರ್ಮದ ಪ್ರಭಾವವು ಎಂತಹದೆಂಬದೂ ಸಜ್ಜನರ ಸತ್ಕರ್ಮವು ಎಂತಹದೆಂಬದೂ ತಿಳಿಯಲೆಂದು ನಮ್ಮ ಚರಿತ್ರನಾಯಕರ ಪೂರ್ವಜರ ವೃತ್ತಾಂತವನ್ನು

ಯಥಾಮತಿಯಿಂದ ಇಲ್ಲಿ ವರ್ಣಿಸುವೆವು. ಇತ್ತ ವಾಚಕರ ಅವಧಾನವಿರಲಿ.

ಸಾತಾರೆಯ ಜಿಲ್ಲೆಯಲ್ಲಿ ಗೊಂದಾವಲಿಯೆಂಬ ಚಿಕ್ಕ ಗ್ರಾಮವಿರುವದು. ಆ ಗ್ರಾಮವು ಚಿಕ್ಕದಾಗಿದ್ದರೂ ಸಜ್ಜನರ ಯೋಗದಿಂದ ಮೋಕ್ಷದಾಯಕ ಕ್ಷೇತ್ರವೆಂದೆನಿಸಿಕೊಂಡಿತು. ಈ ಊರು ಮನೋಹರವಾಗಿರುವದು. ಈ ಗ್ರಾಮದ ಪೂರ್ವಕ್ಕೆ ಆರುಯೋಜನಗಳಲ್ಲಿ ಶ್ರೀ ಪಂಢರೀಕ್ಷೇತ್ರವಿರುವದು. ಪಶ್ಚಿಮಕ್ಕೆ ಶ್ರೀ ಸಿಂಗನಾಥ ಕ್ಷೇತ್ರವಿರುವದು. ದಕ್ಷಿಣಕ್ಕೆ ಪರಮಪವಿತ್ರವಾದ ಶುಕಮುನಿಗಳ ಸ್ಥಾನವಿರುವದು. ಉತ್ತರಕ್ಕೆ ಶಿಂಗಣಾಪುರವಿರುವದು ಅಲ್ಲಿ ಕೈಲಾಸಪತಿಯು ನೆಲಸಿರುವನು. ಈ ಪುಣ್ಯಕರ ಸ್ಥಾನಗಳ ಮಧ್ಯದಲ್ಲಿ ಗೊಂದಾವಲಿಯು ಕ್ಷೇತ್ರವಿರುವದಲ್ಲದೆ ಇದರ ಸೆರೆಯಲ್ಲಿ ಮಾನಗಂಗಾ ನದಿಯು ಹರಿಯುತ್ತಿರುವದು. ಇಂಥ ಪರಮ ಸುಂದರವಾದ ಈ ಗ್ರಾಮದಲ್ಲಿ ಲಿಂಗೋಪಂತರೆಂಬ ಒಬ್ಬ ಸತ್ಕರ್ಮಶೀಲ ಗೃಹಸ್ಥರಿದ್ದರು. ಲಿಂಗೋಪಂತರು ಕುಲಕರ್ಣೀ ವತನದಾರರು. ಇವರು ಶ್ರೀ ಯಾಜ್ಞವಲ್ಕ್ಯರು ಅನುಷ್ಠಿಸಿದ ಶ್ರೀ ಶುಕ್ಲಯಜುರ್ವೇದದ ಮಾಧ್ಯಂದಿನ ಶಾಖೆಯ ಬ್ರಾಹ್ಮಣರು. ಇವರ ಗೋತ್ರವು ವಸಿಷ್ಠ. ವಸಿಷ್ಠರಂತೆಯೇ ಇವರ ತಪಸ್ಸು, ತೇಜಸ್ಸಿನಿಂದ ಯುಕ್ತವಾಗಿತ್ತು. ಇವರು ಶಾಂತವೃತ್ತಿಯವರು. ಪಾಂಡುರಂಗನ ಆರಾಧಕರು. ಪ್ರತಿವರುಷ ಎರಡು ಸಾರೆ ಪಂಢರೀಯಾತ್ರೆಯನ್ನು ತಪ್ಪದೆ ಮಾಡುತ್ತಿದ್ದರು. ಪಾಂಡುರಂಗನಲ್ಲಿಯೇ ಇವರ ನಿಸ್ಸೀಮವಾದ ಭಕ್ತಿ; ಪ್ರತಿನಿತ್ಯದಲ್ಲಿಯೂ ಇವರು ಬ್ರಾಹ್ಮ್ಯಮುಹೂರ್ತಕ್ಕೆ ಏಳುತ್ತಿದ್ದರು. ಪರಮೇಶ್ವರನ ಧ್ಯಾನಮಾಡಿ ಪ್ರಾತರ್ವಿಧಿಗಳನ್ನು ನೆರವೇರಿಸಿ ಯಥಾಸಾಂಗವಾಗಿ ಸ್ನಾನ-ಸಂಧ್ಯಾದಿಗಳನ್ನು ನೆರವೇರಿಸುತ್ತಿದ್ದರು. ಬಳಿಕ ಶ್ರೀಮದ್‌ಭಗವದ್ಗೀತೆಯ ಪಾರಾಯಣ ಮಾಡಿ ಪ್ರಾತರಾಹ್ನಿಕವನ್ನು ಮುಗಿಸುತ್ತಿದ್ದರು. ಇವರು ವತನದಾರರಾದ್ದರಿಂದ ಮನೆಯಲ್ಲಿ ಒಕ್ಕಲತನವಿತ್ತು.

ಆಳು-ಕಡಿಗಳಿಂದಲೂ ದನ-ಕರುಗಳಿಂದಲೂ ಮನೆಯು ಸಮೃದ್ಧವಾಗಿತ್ತು. ಲಿಂಗೋಪಂತರು ವ್ಯವಹಾರದಕ್ಷರಾದ್ದರಿಂದ ಅನುಷ್ಠಾನ ಮುಗಿದ ಕೂಡಲೆ ಎಲ್ಲ ವ್ಯವಹಾರಗಳನ್ನು ನಿರೀಕ್ಷಿಸುತ್ತಿದ್ದರು. ದಾಸ-ದಾಸಿಯರು-ಆಳುಗಳು ಏನು ಮಾಡಿದರೆಂಬುದನ್ನು ನೋಡುವದಲ್ಲದೆ ಮುಂದೆ ಏನು ಮಾಡಬೇಕೆಂಬುದನ್ನೂ ಅವರಿಗೆ ಹೇಳುತ್ತಿದ್ದರು. ಬಳಿಕ ಅವರು ಮಧ್ಯಾಹ್ನದಲ್ಲಿ ಅತಿಥಿಗಳೊಡನೆ ಸುಗ್ರಾಸ ಭೋಜನ ಮಾಡುತ್ತಿದ್ದರು. ಊಟವಾದ ಬಳಿಕ ಪುರಾಣಗಳನ್ನು ಅವಲೋಕಿಸುತ್ತಿದ್ದರು. ಸಿತಾಸಮಯವು ಪ್ರಾಪ್ತವಾಗಲು ಸಾಯಂಸಂಧ್ಯೆಯನ್ನು ತೀರಿಸಿ ಪಾಂಡುರಂಗನ ಭಜನೆಯಲ್ಲಿ ಮಗ್ನರಾಗುತ್ತಿದ್ದರು. ನಾಲ್ಕು ತಾಸು ರಾತ್ರಿಯವರೆಗೆ ಭಜನೆ ಮಾಡಿ ಆ ನಂತರ ಬಂದ-ಹೋದವರ ಯೋಗಕ್ಷೇಮವನ್ನು ತಕ್ಕೊಂಡು ದನ-ಕರುಗಳನ್ನು ನೋಡಿ ಭಗವಚ್ಚಿಂತನೆ ಮಾಡುತ್ತ ಮಲಗಿಕೊಳ್ಳುತ್ತಿದ್ದರು. ಅವರ ಈ ಸತ್ಕರ್ಮಪ್ರಿಯತೆಗೆ ಅನುರೂಪಳಾದ ಹೆಂಡತಿಯು ದೊರಕಿದ್ದಳು. ಇವರ ಪತ್ನಿಯ ಹೆಸರು ರಾಧಾಬಾಯಿ; ಈ ಸಾಧ್ವಿಯು ಪತಿಯೇ ಪರದೈವತವೆಂದು ನಡೆಯುತ್ತಿದ್ದಳು. ಪತಿಸೇವೆಯಲ್ಲಿ ಸ್ವಲ್ಪವೂ ಅಂತರವಾಗದಂತೆ ನೋಡಿಕೊಳ್ಳುವದಲ್ಲದೆ ಮನೆಗೆಲಸಗಳನ್ನು ನಿರಾಲಸದಿಂದ ಮಾಡುತ್ತಿದ್ದಳು. ಪತಿಯ ಹಾಗು ಅತಿಥಿ-ಅಭ್ಯಾಗತರ ಊಟವಾದ ಬಳಿಕ ಈ ಸಾಧ್ವಿಯು ಸಮಸ್ತ ಸೌಭಾಗ್ಯಾಲಂಕಾರಗಳಿಂದ ಶ್ರೀತುಳಸಿಯನ್ನು ಪೂಜಿಸಿ ಆಕೆಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಹಾಕಿ ತಾನು ಉಣ್ಣುತ್ತಿದ್ದಳು. ತುಳಸೀಪೂಜೆಯಲ್ಲಿ ಈ ಸಾಧ್ವಿಗೆ ಪ್ರೇಮ ಬಹಳ; ಸ್ತ್ರೀಯರಿಗೆ ಸೌಭಾಗ್ಯಪ್ರದಾಯಕವಾದ ತುಳಸೀಪೂಜೆಯ ಮಹತ್ವವು ಚನ್ನಾಗಿ ತಿಳಿದಿರಬೇಕು. ಈಗಿನ ಕಾಲದ ಹೆಂಗಸರಲ್ಲಿ ಇಂಥ ತಿಳವಳಿಕೆಯು ಲುಪ್ತಪ್ರಾಯವಾಗುತ್ತ ನಡೆದಿರುವದೆಂದು ಹೇಳಬಹುದು. ಯಾಕಂದರೆ ಎಷ್ಟೋಜನ ಹೆಂಗಸರು ಮೂರ್ಖತನದಿಂದಲೋ ಅಥವಾ ಅಜ್ಞಾನದಿಂದಲೋ ಪೂಜ್ಯದೈವತಸ್ವರೂಪವಾದ

ಶ್ರೀತುಳಸೀಗಿಡದ ಮೇಲೆ ತಮ್ಮ ಹಾಸಿಗೆ ಹುಪ್ಪಡಿ ಮೊದಲಾದವುಗಳನ್ನು ಒಣಗಹಾಕುವರು! ಯಾವ ತುಳಸೀಗಿಡವು ಪರಮಪೂಜ್ಯವೋ ಅಂಥ ಗಿಡದ ಮೇಲೆ ಸಾಮಾನ್ಯ ಗಿಡದ ಮೇಲೆ ಹಾಕಿದಂತೆ ಬಟ್ಟೆಗಳನ್ನು ಒಣಗಹಾಕುವವರಿಗೆ ತುಳಸಿಯ ಮಹತ್ವವು ಗೊತ್ತಿಲ್ಲವೆಂತಲೇ ಹೇಳಬೇಕಾಗುವದು. ಈ ಬಗೆಯ ಅಜ್ಞಾನವನ್ನು ತೊರೆದು ಹೆಂಗಸರು ತುಳಸಿಯ ವಿಷಯವಾಗಿ ಸರ್ವದಾ ಪೂಜ್ಯಬುದ್ಧಿಯುಳ್ಳವರಾಗಬೇಕು. ಈ ನಮ್ಮ ರಾಧಾಬಾಯಿ ಮಾತೆಯು ಈ ವಿಷಯದಲ್ಲಿ ಸಮಸ್ತ ಹೆಂಗಳೆಯರಿಗೂ ಆದರ್ಶಪ್ರಾಯಳಾಗಿದ್ದಳು. ಅಂತೇ ಆಕೆಯ ಪವಿತ್ರ ಉದರದಲ್ಲಿ ಮಹಾಭಗವದ್ಭಕ್ತನು ಉದಯಿಸಿದನು! ಇರಲಿ.

ಲಿಂಗೋಪಂತ ಹಾಗು ಪರಮಸಾಧ್ವಿಯಾದ ರಾಧಾಬಾಯಿ ಇವರಿಬ್ಬರೂ ಆನಂದದಿಂದ ಸಂಸಾರ ಮಾಡುತ್ತಿರಲು, ಎಷ್ಟೋ ವರುಷಗಳು ಕಳೆದವು. ಲಿಂಗೋಪಂತರ ಉಪಾಸನೆಯು ಅಖಂಡವಾಗಿ ನಡೆಯಿತು. ಆತನ ಸತ್ಕರ್ಮದ ತೇಜಸ್ಸು ಹೆಚ್ಚಿತು. ಶ್ರೀ ಪಾಂಡುರಂಗನು ಆತನ ಭಕ್ತಿಗೆ ಪ್ರಸನ್ನಚಿತ್ತನಾದನು. ಹೀಗಿರುತ್ತಿರಲು. ಲಿಂಗೋಪಂತನ ಹಾಗು ಆತನ ಹೆಂಡತಿಯಲ್ಲಿ ಒಂದು ವಿಚಾರವು ಬಂದಿತು. ಏನೆಂದರೆ--"ದೇವರ ಕೃಪೆಯಿಂದ ನಮಗೆ ಯಾವ ಸಂಪತ್ತಿಗೂ ಕೊರತೆಯಿಲ್ಲ. ಮನೆಯಲ್ಲಿ ಧನಧಾನ್ಯಾದಿಗಳು ಸಮೃದ್ಧವಾಗಿರುವವು. ದಾಸದಾಸಿಯರು ಬೇಕಾದಷ್ಟು ಜನರಿರುವರು. ಊರಲ್ಲಿ ನಮ್ಮ ಅಧಿಕಾರವು ಚನ್ನಾಗಿ ನಡೆಯುವದು. ಭಗವದನುಗ್ರಹದಿಂದ ಗೃಹಸ್ಥಧರ್ಮದ ಎಲ್ಲ ಕಾರ್ಯಗಳೂ ಯಥಾಸಾಂಗವಾಗಿ ಜರಗುತ್ತಲಿರುವವು; ಆದರೆ ಸಂತತಿ ಕೊರತೆಯು ಮಾತ್ರ ಇದುವರೆಗೂ ತುಂಬಿಬರಲಿಲ್ಲ. ನಮ್ಮ ತಲೆಗೇ ನಮ್ಮ ವಂಶವೃಕ್ಷವು ಕಮರಿ ಹೋಗುವದೇ ಹ್ಯಾಗೆ? ದೇವಾ! ಇದು ನಿನಗೆ ಸಮ್ಮತವೇ? ನಿನ್ನ ಕೃಪೆಯಿಂದ ಈ ಕೊರತೆ ತುಂಬಿಬರಲಾರದೇ?"

ಈ ಮೇರೆಗೆ ಆ ದಂಪತಿಗಳಲ್ಲಿ ವಿಚಾರವಿರುವದೊಂದೇ ತಡ; ಪರಮಾತ್ಮನು ಅವರ ಇಚ್ಛೆಯನ್ನು ಪೂರೈಸಲಿಕ್ಕೆ ಒಂಟಿಗಾಲಮೇಲೆಯೇ ನಿಂತಿದ್ದನು. ಅಂದೇ ರಾತ್ರಿಯಲ್ಲಿ ಲಿಂಗೋಪಂತನಿಗೆ ಸ್ವಪ್ನದಲ್ಲಿ ದೃಷ್ಟಾಂತವಾಯಿತು. "ಭಕ್ತ ಶಿಖಾಮಣಿಯೇ, ನಿನ್ನ ಭಕ್ತಿಗೆ ಮೆಚ್ಚಿರುವೆನು. ನೀನು ಪ್ರತಿವರುಷ ಎಷ್ಟು ವಿಘ್ನ ಬಂದರೂ ತಪ್ಪದೆ ಪಂಢರಿಗೆ ಬರುವದರಿಂದ ನಿನ್ನ ನಿಶ್ಚಯ ಬುದ್ಧಿಯನ್ನು ನೋಡಿ ಆನಂದಪಟ್ಟಿರುವೆನು. ನಿನ್ನ ಸತ್ಕರ್ಮ ಪ್ರಿಯತೆಯು ಹೀಗೆಯೇ ದೃಢವಾಗಿರಲಿ. ನೀನು ಇನ್ನು ಮುಂದೆ ಪಂಢರಿಗೆ ಬರಬೇಡ. ನಿನ್ನ ಮನೆಯಲ್ಲಿಯೇ ನಾನು ವಾಸಿಸುತ್ತೇನೆ. ನಿನ್ನ ಮನೆಯಲ್ಲಿರುವ ನನ್ನನ್ನೇ ಪೂಜಿಸಿ ಕೃತಾರ್ಥನಾಗು. ನಿನಗೆ ಒಬ್ಬ ಭಗವದ್ಭಕ್ತನಾದ ಮಗನು ಹುಟ್ಟುವನು. ಮುಂದೆ ನಿನ್ನ ವಂಶದಲ್ಲಿ ಭಗವದಂಶವೇ ಪ್ರಕಟವಾಗುವದು. ಚಿಂತಿಸಬೇಡ, ನಿನ್ನ ಕುಲಕೋಟಿ ಉದ್ಧೃತವಾಯಿತು."

ಲಿಂಗೋಪಂತರಿಗೆ ಪಕ್ಕನೆ ಎಚ್ಚರವಾಯಿತು. ನೋಡುತ್ತಾರೆ; ಯಾರೂ ಇಲ್ಲ. ದೃಷ್ಟಾಂತದಸಂಗತಿಯೂ, ವೃದ್ಧ ಬ್ರಾಹ್ಮಣರೂಪದಿಂದ ಪ್ರತ್ಯಕ್ಷನಾದ ಪಾಂಡುರಂಗನಮೂರ್ತಿಯೂ, ಪ್ರತ್ಯಕ್ಷ ಸಂಭಾಷಣ-ದರ್ಶನಕ್ಕಿಂತಲೂ ಹೆಚ್ಚಾಗಿ ಸ್ಮರಣೆಯಲ್ಲಿದ್ದವು. ಅವರಿಗೆ ತುಂಬಾ ಸಂತೋಷವಾಯಿತು. ಲಗಬಗೆಯಿಂದ ಪತ್ನಿಯನ್ನೆಬ್ಬಿಸಿ ಆಕೆಗೆ ಈ ಆನಂದದ ಸಂಗತಿಯನ್ನು ಹೇಳಬೇಕೆನ್ನುವಷ್ಟರಲ್ಲಿ ಆಕೆಯೂ ತಟ್ಟನೆದ್ದು ಕುಳಿತು ತನಗೆ ಆದ ವೃತ್ತಾಂತವನ್ನು ಪತಿಯ ಮುಂದೆ ಸಾದ್ಯಂತವಾಗಿ ಹೇಳಿದಳು. ಹೀಗೆ ಇಬ್ಬರಿಗೂ ಒಂದೇ ಬಗೆಯ ದೃಷ್ಟಾಂತವು ಬಿದ್ದದ್ದು ಪರಸ್ಪರರಿಗೆ ತಿಳಿಯಲು ಅವರಿಗೆ ಆದ ಆನಂದವು ಇಂತಿಷ್ಟೇ ಎಂದು ಹೇಳಲು ಬರುವಂತಿಲ್ಲ. ಯಾರಿಗೆ ಇದುವರೆಗೂ ಮಕ್ಕಳೇ ಇಲ್ಲವೋ ಅಂಥವರ ಹೊಟ್ಟೆಯಲ್ಲಿ ಪ್ರತ್ಯಕ್ಷ ದೇವರೇ ಹುಟ್ಟಿ ಬರುವನೆಂಬ ದೃಷ್ಟಾಂತವಾದ ಬಳಿಕ ಎಷ್ಟು ಆನಂದವಾಗಬೇಡ! ಲಿಂಗೋಪಂತರು ಅಂದು ತಮ್ಮ ಮನೆಯಲ್ಲಿ

ರುವ ಪಾಂಡುರಂಗಮೂರ್ತಿಗೆ ಕ್ಷೀರಾಭಿಷೇಕವನ್ನು ಮಾಡಿಸಿ ಬ್ರಾಹ್ಮಣ ಸಮಾರಾಧನೆಯನ್ನು ಮಾಡಿದರು. ರಾಧಾಬಾಯಿ ಮಾತೆಯು ಆನಂದ ಪರವಶಳಾಗಿ ಭಗವದ್ವಚನವು ಎಂದು ಸತ್ಯವಾಗುವದೋ ಎಂದು ದಾರಿಯನ್ನು ನೋಡಹತ್ತಿದಳು.

ಲಿಂಗೋಪಂತರೂ, ರಾಧಾಬಾಯಿಮಾತೆಯೂ ಮೊದಲೇ ಸದ್ಭಕ್ತರು; ಮೇಲಾಗಿ ಪರಮಾತ್ಮನ ಅಭಯವಚನ; ಅಂದಬಳಿಕ ಅವರ ಇಚ್ಛಿತಕಾರ್ಯವು ಕೈಗೂಡುವದಕ್ಕೆ ತಡವೇನು? ರಾಧಾಬಾಯಿಮಾತೆಯು ಸ್ವಲ್ಪ ದಿವಸಗಳಲ್ಲಿ ಗರ್ಭವತಿಯಾದಳು. ಒಳಗೆ ತೇಜಸ್ವಿಯಾದ ಗರ್ಭವು ಇರುವದೆಂಬುದನ್ನು ಅವಳ ಸುಂದರ ಮುಖಲಕ್ಷಣವು ವ್ಯಕ್ತಗೊಳಿಸತೊಡಗಿತು. ಲಿಂಗೋಪಂತರು ತಮ್ಮ ಹೊಟ್ಟೆಯಲ್ಲಿ ಮಹಾ ಭಗವದ್ಭಕ್ತನು ಹುಟ್ಟಿ ಬರುವನೆಂದು ಹಿಗ್ಗಿ ಹಿಗ್ಗಿ ಹಿಗ್ಗುತ್ತಲಿದ್ದರು. ರಾಧಾಬಾಯಿಮಾತೆಗೆ ಪುಂಸವನಾದಿ ಸಕಲ ಗರ್ಭಸಂಸ್ಕಾರಗಳು. ಶಾಸ್ತ್ರವಿಧಿಯಂತೆ ನೆರವೇರಿದವು. ನವಮಾಸವು ಪೂರ್ತಿಯಾಯಿತು. ಒಂದು ಶುಭಮುಹೂರ್ತದಲ್ಲಿ ಆ ಸಾಧ್ವಿಯು ಸುಂದರ ಶಿಶುವನ್ನು ಜನಿಸಿದಳು. ಆ ಶಿಶುವನ್ನು ನೋಡಿ ಸಮಸ್ತರಿಗೂ ಆನಂದವಾಯಿತು. ಈ ಶಿಶುವಿನಿಂದಲೇ ತಮ್ಮ ವಂಶವು ಉದ್ಧೃತವಾಗಬೇಕಾದ್ದರಿಂದ ಲಿಂಗೋಪಂತರ ಸಂತೋಷಕ್ಕಂತೂ ಎಣೆಯೇ ಉಳಿಯಲಿಲ್ಲ. ಹುಟ್ಟಿದ ಹನ್ನೆರಡನೆಯ ದಿವಸಕ್ಕೆ ಆ ಶಿಶುವಿಗೆ 'ರಾವಜೀ' ಎಂದು ನಾಮಕರಣ ಮಾಡಿದರು. ಈ ರಾವಜೀಪಂತರೇ ನಮ್ಮ ಕಥಾನಾಯಕರ ಜನಕರಾದ್ದರಿಂದ ಈ ಮಹಾನುಭಾವರ ಪುಣ್ಯವನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ ಇರುವದು. ಲಿಂಗೋಪಂತರ ಸತ್ಕರ್ಮದ ಫಲವೇ ಮೂರ್ತಿಮಂತವಾಗಿ ರಾವಜೀಪಂತರ ರೂಪದಿಂದ ಒಂದಿರುವದೆಂದು ಭಾಸವಾಗುವಂತಿತ್ತು. ಸತ್ಕರ್ಮದ ಪ್ರಭಾವವೇ ಅಂತಹದಾಗಿರುವದು.

## ೨ನೆಯ ಅಧ್ಯಾಯ:—ಸಗುಣರೂಪಧಾರಣ.



ಲಿಂಗೋಪಂತರ ಮಕ್ಕಳಾದ ರಾವಜೀಪಂತರು ಭಗವದ್ಭಜನದಂತೆ ಮಹಾಸಾಧುಗಳಾದರು. ಚಿಕ್ಕಂದಿನಲ್ಲಿಯೇ ಅವರ ಸಾಧುಸ್ವಭಾವವು ಜನರ ಅನುಭವಕ್ಕೆ ಬರತೊಡಗಿತು. "ಲಿಂಗೋಪಂತರು ಪುಣ್ಯವಂತರು. ಅಂತೇ ಇವರ ಹೊಟ್ಟೆಯಲ್ಲಿ ಇಂಥ ಸಾಧುವಾದ ಪುತ್ರನು ಹುಟ್ಟಿರುವನು" ಎಂದು ಜನರು ಮಾತನಾಡಿಕೊಳ್ಳಲಾರಂಭಿಸಿದರು. ರಾವಜೀಪಂತರ ಲಕ್ಷ್ಯವು ಯಾವಾಗಲೂ ಭಗವದ್ಧ್ಯಾನದ ಕಡೆಗೆ ಇರುತ್ತಿತ್ತು. ಪ್ರಾಪಂಚಿಕ ವಿಷಯಗಳಲ್ಲಿ ಸ್ವಲ್ಪಾದರೂ ಆಸಕ್ತಿಯಿರಲಿಲ್ಲ. ಲಿಂಗೋಪಂತರು ತಮ್ಮ ಮಗನ ಈ ವಿರಕ್ತ ಸ್ವಭಾವವನ್ನು ನೋಡಿ ಸಂತೋಷಪಡುತ್ತಿದ್ದರು. ಲಿಂಗೋಪಂತರ ಸ್ಥಳದಲ್ಲಿ ಬೇರೊಬ್ಬ ವಿಷಯಾಂಧ ತಂದೆಯಿದ್ದರೆ, ರಾವಜೀಪಂತರ ಈ ಕೃತಿಯನ್ನು ಚನ್ನಾಗಿ ನಿಷೇಧಿಸುತ್ತಿದ್ದನು; ಇರಲಿ. ಲಿಂಗೋಪಂತರು ಮಗನ ಮದುವೆಯನ್ನು ಮಾಡಿದರು. ಇವರ ಸೊಸೆಯ ಹೆಸರು ಗೀತಾಬಾಯಿ ಎಂದಿತ್ತು. ಗೀತಾಬಾಯಿಯು ಮಹಾಸಾಧ್ವಿಯೂ, ಪ್ರಾಪಂಚಿಕ ಕಾರ್ಯಗಳಲ್ಲಿ ಕುಶಲಳೂ ಆಗಿದ್ದಳು. ಸೊಸೆಯ ಈ ಸದ್ಗುಣಗಳಿಂದ ಲಿಂಗೋಪಂತರು ಸಂತುಷ್ಟರಾದರು.

ರಾವಜೀಪಂತ ಹಾಗು ಗೀತಾಬಾಯಿಯರು ಪರಸ್ಪರ ಅತ್ಯಂತ ಪ್ರೇಮದಿಂದ ನಡೆದುಕೊಳ್ಳುತ್ತಿದ್ದರು. ಇಬ್ಬರೂ ಸತ್ಕರ್ಮಶೀಲರಾಗಿದ್ದರು. ಹಿರಿಯರ ಆಜ್ಞೆಯನ್ನು ಪಾಲಿಸುವದರಲ್ಲಿ ಇಬ್ಬರೂ ಅತ್ಯಂತ ದಕ್ಷರಿದ್ದರು. ರಾವಜೀಪಂತರು ಪ್ರಪಂಚದಲ್ಲಿ ಉದಾಸರಿದ್ದಾಗ್ಯೂ, ತಂದೆಯು ಅಪ್ಪಣೆಮಾಡಿದಷ್ಟು ಕಾರ್ಯಗಳನ್ನು ತಡವಿಲ್ಲದೆ ಮಾಡಿ ಮತ್ತೆ ಭಗವದ್ಧ್ಯಾನದಲ್ಲಿ ಆಸಕ್ತರಾಗುತ್ತಿದ್ದರು. ರಾವಜೀಪಂತ ಹಾಗು ಗೀತಾ

ಬಾಯಿಯವರು ಹಿರಿಯರೊಡನೆ ನಡೆಯುವ ಸೌಜನ್ಯವನ್ನು ನೋಡಿ, ನೆರೆ ಹೊರೆಯುವರು ಈ ದಂಪತಿಗಳನ್ನು ಅಂತಃಕರಣಪೂರ್ವಕವಾಗಿ ಅಭಿನಂದಿಸುತ್ತಿದ್ದರು. ಪೂರ್ವಸಂಚಿತ ಪುಣ್ಯಬಲದಿಂದ ಈ ದಂಪತಿಗಳ ಉದರದಲ್ಲಿ ಭಗವದಂಶವು ಪ್ರಕಟವಾಗಬೇಕಾದ್ದರಿಂದ ಈ ಮಹನೀಯರ ಪುಣ್ಯವನ್ನು ಎಷ್ಟು ಕೊಂಡಾಡಿದರೂ ಸ್ವಲ್ಪವೇ ಇರುವದು. ಇಂಥ ಪುಣ್ಯಶಾಲಿಗಳ ಯೋಗದಿಂದಲೇ ಜಗತ್ತಿಗೆ ಸಗುಣಮೂರ್ತಿಯ ದರ್ಶನಲಾಭವು ದಗುವದು. ಪರಮಾತ್ಮನು ಭಕ್ತರ ಋಣದಲ್ಲಿ ಇದ್ದನೆಂದರೆ, ಅವರನ್ನು ತೃಪ್ತಿಪಡಿಸುವದಕ್ಕೋಸ್ಕರ ಸಗುಣರೂಪದಿಂದ ಪ್ರಕಟನಾಗಬೇಕಾಗುತ್ತದೆ. ಹೀಗೆ ಪ್ರಕಟನಾದಾಗ ಕೆಲವರಿಗೆ ಮಗನಾಗುವನು; ಕೆಲವರಿಗೆ ತಂದೆಯಾಗುವನು; ಕೆಲವರಿಗೆ ಮಿತ್ರನಾಗುವನು; ಕೆಲವರಿಗೆ ಗುರುವಾಗುವನು. ಕೆಲವರಿಗೆ ಆರಾಧ್ಯದೈವತನಾಗುವನು. ಹೀಗೆ ಹಲವುಬಗೆಯ ಸಂಬಂಧಗಳಿಂದ ಭಕ್ತರ ಮನಸ್ಸನ್ನು ಸಂತೋಷಪಡಿಸುವನು. ಹೇಳತಕ್ಕ ಮುಖ್ಯಾಂಶನೇನಂದರೆ ಪರಮಾತ್ಮನು ಭಕ್ತರ ಸಲುವಾಗಿಯೇ ಜನ್ಮ ತಾಳುವನು. ಭಕ್ತರ ಸಲುವಾಗಿಯೇ ಸಗುಣ ರೂಪ ಧರಿಸುವನು. ಭಕ್ತರ ಸಲುವಾಗಿಯೇ ಅನಂತ ಲೀಲೆಗಳನ್ನು ಮಾಡುವನು. ಗೀತಾಬಾಯಿಯು, ಪೂರ್ವಜನ್ಮದಲ್ಲಿ ಮಹಾ ಸಾಧ್ವಿಯಾದ ರಾಣೂಬಾಯಿಯಾಗಿದ್ದಳು. ರಾವಜೀಪಂತರು ಸೂರ್ಯಾಜಿಪಂತರಾಗಿದ್ದರು. ಆಗ ಇವರ ಹೊಟ್ಟೆಯಲ್ಲಿ ಶ್ರೀ ಮಾರುತಿಯು ಸಮರ್ಥ ರಾಮದಾಸ ಎಂಬ ಅಭಿಧಾನದಿಂದ ಹುಟ್ಟಿಬಂದಿದ್ದನು. ರಾಣೂಬಾಯಿಯು ಅಂತ್ಯಕಾಲದಲ್ಲಿ ಮಗನನ್ನು ಕುರಿತು—"ಅಪ್ಪಾ ಮಗೂ, ನೀನು ನನ್ನ ಉದರದಲ್ಲಿ ಅವತರಿಸಿ ನನ್ನನ್ನು ಧನ್ಯಳನ್ನಾಗ ಮಾಡಿದೆ! ಆದರೆ ನೀನು ಲಗ್ನವಾಗಿ ಗೃಹಸ್ಥಧರ್ಮವನ್ನು ಪಾಲಿಸಿದ್ದನ್ನು ನೋಡಲಿಲ್ಲ" ಎಂಬ ಉದ್ಗಾರಗಳನ್ನು ತೆಗೆದಳು. ತಾಯಿಯ ಈ ಇಚ್ಛೆಯನ್ನು ತಿಳಿದು ಸಮರ್ಥರು—"ಅಮ್ಮಾ, ಈಗ ಸಂತೋಷದಿಂದ ಶ್ರೀ ರಾಮಚರಣಗಳಲ್ಲಿ ಐಕ್ಯಳಾಗು; ಮುಂದೆ

ನಿನ್ನ ಉದರದಲ್ಲಿ ಪುನಃ ಹುಟ್ಟಿಬಂದು ನಿನ್ನ ಇಚ್ಛೆಯನ್ನು ಪೂರ್ಣಪಡಿಸುವೆನು'' ಎಂದು ನುಡಿದು ತಾಯಿಗೆ ಸಮಾಧಾನವನ್ನುಂಟು ಮಾಡಿದರು. ಈ ವಚನವನ್ನು ಪರಿಪಾಲಿಸುವದಕ್ಕಾಗಿಯೇ ಶ್ರೀ ಸಮರ್ಥರು ಪುನಃ ಸಗುಣ ರೂಪವನ್ನು ತಾಳಬೇಕಾಯಿತು.

ಹೀಗೆ ಪೂರ್ವ ಜನ್ಮದಲ್ಲಿ ಮಹಾತಪಸ್ವಿಗಳಾದ್ದರಿಂದಲೇ ರಾವಜೀಪಂತ-ಗೀತಾಬಾಯಿಯವರು ಈ ಜನ್ಮದಲ್ಲಿ ಅತ್ಯಂತ ಸಾಧುಗಳಾಗಿ ಜಗತ್ತಿಗೆ ಪೂಜ್ಯರಾದರು. ಲಿಂಗೋಪಂತರು ಪಾಂಡುರಂಗನ ವರವನ್ನು ಸ್ಮರಿಸಿ, ಕುಲಕೋಟಿಯನ್ನುದ್ಧರಿಸುವ ಸಗುಣ ಪರಮಾತ್ಮನು ಯಾವಾಗ ಹುಟ್ಟಿಬರುವನೋ ಎಂದು ಎದುರು ನೋಡುತ್ತಿದ್ದರು. ರಾವಜೀಪಂತರ ಪರಿಶುದ್ಧವೃತ್ತಿಯ ಪ್ರಭಾವವು ನಾಲ್ಕೂ ಕಡೆಗೆ ಹಬ್ಬಿತು. ಅವರು ಅತ್ಯಂತ ಕಷ್ಟಾಳುವಾಗಿದ್ದರೂ ಕರ್ಮಮಾರ್ಗವನ್ನು ಎಂದಿಗೂ ತಪ್ಪಿ ನಡೆಯುತ್ತಿದ್ದಿಲ್ಲ. ಎತ್ತಿನ ಕಷ್ಟದಿಂದಾದ ಧಾನ್ಯಾದಿಗಳನ್ನು ಉಣ್ಣಬಾರದೆಂದು ಎರಡು ಕೋಣಗಳನ್ನು ಮನೆಯಲ್ಲಿಟ್ಟುಕೊಂಡು ತಾವೇ ಬೇಸಾಯ ಮಾಡಿ ಅದರಿಂದ ಬಂದ ಧಾನ್ಯಗಳನ್ನೇ ಉಣ್ಣುತ್ತಿದ್ದರು. ಇವರ ಈ ನಿಷ್ಠೆಯು ಅತ್ಯಂತ ಕಷ್ಟದಾಯಕವಾಗಿದ್ದರೂ ಕಡೆತನಕ ಪಾಲಿಸಿದರು. ಹೀಗಿರಲು ಗೀತಾಬಾಯಿಯು ಗರ್ಭವತಿಯಾದಳು. ಲಿಂಗೋಪಂತರಿಗೆ ಆನಂದವಾಯಿತು. ಈ ಪುಣ್ಯ ಗರ್ಭದಲ್ಲಿ ಪರಮಾತ್ಮನ ಸಗುಣ ರೂಪವಿರಬಹುದೆಂಬ ಆತ್ಮವಿಶ್ವಾಸವು ಅವರಲ್ಲಿ ಒಂದು ಬಗೆಯ ಸಮಾಧಾನವನ್ನುಂಟುಮಾಡಿತು. ಶ್ರೀ ಮಾರುತಿರಾಯನೇ ಗರ್ಭದಲ್ಲಿ ಶಿಶುರೂಪವತಾಳಿ ವಾಸಮಾಡಿದ ಬಳಿಕ ಗರ್ಭದ ತೇಜಸ್ಸನ್ನು ವರ್ಣಿಸುವದೇನು? ಆ ಗರ್ಭದ ದೈವೀ ತೇಜಸ್ಸು ಗೀತಾಬಾಯಿಯ ಮುಖದಮೇಲೆ ಸ್ವಾಭಾವಿಕವಾಗಿ ಪ್ರಕಟವಾದ್ದರಿಂದ ಲಿಂಗೋಪಂತರು ತಮ್ಮ ಆನಂದವು ಸತ್ಯವಾದದ್ದೆಂದು ಭಾವಿಸಿದರು.

ಶುಕ್ಲೇಂದುವಿನಂತೆ ಗರ್ಭವು ಬೆಳೆಯಲಾರಂಭಿಸಿತು. ಗೀತಾಬಾಯಿಗೆ ಸಾತ್ವಿಕವಾದ ಬಯಕೆಗಳು ಆಗಲಾರಂಭಿಸಿದವು. ಅವಳು ಒಮ್ಮೊಮ್ಮೆ "ಶ್ರೀರಾಮನ ಉಪಾಸನೆಯನ್ನು ಬೆಳೆಸುವೆನು. ಜನರ ಅಂತಃಕರಣದಲ್ಲಿ ಮನೆಮಾಡಿಕೊಂಡಿರುವ ಪಾಪಬುದ್ಧಿಯನ್ನು ಖಂಡಿಸುವೆನು. ಪತಿತರನ್ನು ಉದ್ಧರಿಸುವೆನು" ಎಂದು ನುಡಿಯುತ್ತಿದ್ದಳು. ಇದು ಭಗವದ್ವಾಣಿಯೆಂದು ಲಿಂಗೋಪಂತರು ನಿಶ್ಚಯಿಸಿ ಪರಮಾತ್ಮನು ಹುಟ್ಟಿಬರುವನೆಂಬ ವಿಷಯದಲ್ಲಿ ನಿಶ್ಚಲಮನಸ್ಕರಾದರು. ಗೀತಾಬಾಯಿಮಾತೆಗೆ ನವಮಾಸಗಳು ತುಂಬಿದವು. ಶಾಲಿವಾಹನ ಶಕೆ ೧೭೬೬ ಮಾಘ ಶುದ್ಧ ೧೦ಯ ಶುಭದಿವಸವು ಪ್ರಾಪ್ತವಾಯಿತು. ಅಂದು ಆ ಮಹಾಸಾಧ್ವಿಯು ಬೇನೆತಿನ್ನಲಾರಂಭಿಸಿ, ಅಲ್ಪಾವಕಾಶದಲ್ಲಿಯೇ ಸುಂದರ ಪುತ್ರರತ್ನವನ್ನು ಜನಿಸಿದಳು. ಮೊಮ್ಮಗನು ಹುಟ್ಟಿದ್ದನ್ನು ಕೇಳಿ ಲಿಂಗೋಪಂತರು ಅತ್ಯಂತ ಹರುಷವನ್ನು ತಾಳಿದರು. ರಾವಜೀಪಂತರು ಸೂತಿಕಾಗೃಹಕ್ಕೆ ಬಂದು ಭಗವದ್ವಿಭೂತಿಯು ಪ್ರಕಟವಾಯಿತೆಂದು ತಿಳಿದು ಆ ಶಿಶುವಿಗೆ ಸಾಷ್ಟಾಂಗ ಪ್ರಣಾಮಗಳನ್ನು ಮಾಡಿ, ಅನಂತ ಸ್ತೋತ್ರಗಳನ್ನು ಮಾಡಿದರು. ಮಹಾಭಗವದ್ಭಕ್ತನಾದ ರಾವಜೀಪಂತನು ತನ್ನ ಗುರುತು ಹಿಡಿದನೆಂಬ ಕಾರಣದಿಂದಲೋ ಎಂಬಂತೆ ಆ ಶಿಶುವು ನಗಲಾರಂಭಿಸಿತು. ನೆರೆದವರೆಲ್ಲರಿಗೂ ಆಶ್ಚರ್ಯವಾಯಿತು. ಲೋಕದಲ್ಲಿ ಸಾಮಾನ್ಯವಾಗಿ ಹುಟ್ಟಿದ ಕೂಡಲೆ ಶಿಶುಗಳು ಅಳುವವಲ್ಲದೆ ನಗಲಾರವು. ಈ ಶಿಶುವು ಅಲೌಕಿಕವಾದ್ದರಿಂದಲೇ ಈ ಪ್ರಕಾರ ನಗುವದೆಂದು ಸರ್ವರೂ ನಿಶ್ಚಯಿಸಿದರು. ಪ್ರಿಯವಾಚಕರೇ, ಭಕ್ತಾಧೀನನಾದ ಶ್ರೀ ಮಾರುತಿಯು ಭಕ್ತರನ್ನುದ್ಧರಿಸುವದಕ್ಕಾಗಿ ಭೂಲೋಕದಲ್ಲಿ ಮತ್ತೆ ಅವತರಿಸಿದನು. ಭೂಮಾತೆಯೇ ನೀನೇ ಧನ್ಯಳು! ಕಲಿಪ್ರಾಬಲ್ಯದಿಂದ ನಿನ್ನಲ್ಲಿ ದುಷ್ಟರ ಉದಯವಾಗುತ್ತ ನಡೆದದ್ದರಿಂದಲೇ ಪರಮಾತ್ಮನು ಮೇಲಿಂದಮೇಲೆ ಸಾಧುರೂಪದಿಂದ ಹುಟ್ಟಿಬರುತ್ತಿರುವನು. ಇದಕ್ಕಾಗಿ ನೀನು ದುಷ್ಟರನ್ನೂ ಕೂಡಾ ಶ್ಲಾಘಿಸುತ್ತಿರಬಹುದಲ್ಲವೇ?

ಬಳಿಕ ಲಿಂಗೋಪಂತರು ಆಪ್ತೇಷ್ಟರಿಗೂ, ಸಕಲ ಜನರಿಗೂ, ಈ ಮಹದಾನಂದವನ್ನು ತಿಳಿಸಿ, ಕೊಬ್ಬರೀ-ಸಕ್ಕರೆಯನ್ನು ಹಂಚಿದರು. ಹುಟ್ಟಿದ ಹನ್ನೆರಡನೇ ದಿವಸ ಸುಮಂಗಲೆಯರು ಜೋಗುಳಪಾಡಿ ಆ ಶಿಶುವಿಗೆ 'ಗಣಪತಿ' ಎಂದು ಮಂಗಳನಾಮಕರಣ ಮಾಡಿದರು. ಮಾನುಷ ವೇಷ ಧಾರಣಮಾಡಿದ ಮಾರುತಿರಾಯನು ಗಣಪತಿಯೆಂಬ ನಾಮಾಭಿಧಾನದಿಂದ ಲಿಂಗೋಪಂತರಿಗೆ ಮೊಮ್ಮಗನಾಗಿಯೂ, ರಾವಜೀಪಂತರಿಗೆ ಮಗನಾಗಿಯೂ ಅನೇಕಬಗೆಯ ಬಾಲಲೀಲೆಗಳಿಂದ ಅವರನ್ನು ಸಂತೋಷಗೊಳಿಸಲಾರಂಭಿಸಿದನು. ಈ ಸಗುಣ ಅವತಾರವನ್ನು ನೋಡಿ ಲಿಂಗೋಪಂತರು ಧನ್ಯರಾದರು.

---

## ೩ನೆಯ ಅಧ್ಯಾಯ:—ಬಾಲ-ಲೀಲೆಗಳು.

ಪ್ರಿಯ ಪಾಠಕರೇ, ಪರಮಾತ್ಮನು ಭಕ್ತರ ಸಲುವಾಗಿ ಸಗುಣ ರೂಪ ಧಾರಣಮಾಡಿ ಬಂದಬಳಿಕ ಸಾಮಾನ್ಯ ಮನುಷ್ಯರಂತೆಯೇ ಆಚರಿಸಬೇಕಾಗುವದಲ್ಲವೇ? ಆದರೂ ಆತನು ಕೇವಲ ಅಜ್ಞಾನ ಮನುಷ್ಯನಂತೆ ನಟಿಸದೆ, ತನ್ನ ಅಮಾನುಷತನವನ್ನು ಆಗಾಗ್ಗೆ ಪ್ರಕಟಿಸಿ ತನ್ನ ವಿಷಯವಾಗಿ ಜನರಲ್ಲಿ ಭಕ್ತಿ-ಭಾವನೆಗಳುಂಟಾಗುವಂತೆ ಮಾಡಬೇಕಾಗುತ್ತಿರುವದು. ಜನತೆಯಲ್ಲಿ ತನ್ನ ವಿಷಯಕ್ಕೆ ಪ್ರೇಮಾದರಗಳನ್ನು ಹುಟ್ಟಿಸಿ, ಅವರನ್ನು ಸತ್ಕರ್ಮಾರ್ಗಕ್ಕೆ ಹಚ್ಚುವದೇ ಆತನ ಕೆಲಸವಾದ್ದರಿಂದ ಆತನು ಹಾಗೆ ಮಾಡಲೇಬೇಕಾಗುತ್ತದೆ. ಅದರಂತೆ ಪ್ರಸ್ತುತದ ನಮ್ಮ ಚರಿತ್ರನಾಯಕರಾದರೂ, ಲೋಕದಲ್ಲಿ ಭಕ್ತಿಮಾರ್ಗವನ್ನು ಬೆಳಿಸಬೇಕಾದ್ದರಿಂದ ಅದರ ಅಸ್ತಿಭಾರವನ್ನು ಚಿಕ್ಕಂದಿನಿಂದಲೇ ಹಾಕಬೇಕಾಯಿತು. ಇರಲಿ.

ಗಣಪತಿಯು ತೀರ ಚಿಕ್ಕ ವಯಸ್ಸಿನಲ್ಲಿಯೇ ಅಂದರೆ ಶೈಶವಾವಸ್ಥೆಯಲ್ಲಿಯೇ ತನ್ನ ಅವತಾರದ ಗುರುತನ್ನು ತೋರಿಸಲಾರಂಭಿಸಿದನು.

ಒಂದು ದಿನ ಗೀತಾಬಾಯಿಯು ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ, ನೀರು ತರುವದಕ್ಕಾಗಿ ನದಿಗೆ ಹೋಗಿದ್ದಳು. ದಾಸ-ದಾಸಿಯರೆಲ್ಲರೂ ತಮ್ಮ ತಮ್ಮ ಉದ್ಯೋಗಕ್ಕೆ ಹೋಗಿದ್ದರು. ಮನೆಯಲ್ಲಿ ಯಾರೂ ಇದ್ದಿಲ್ಲ. ಗೀತಾಬಾಯಿಯು ಕೊಡ ತುಂಬಿಕೊಂಡು ಮನೆಗೆ ಬಂದಳು. ಬಾಗಿಲ ತೆರೆದಳು. ಮನೆಯಲ್ಲಿ ಯಾರೂ ಇರದಿದ್ದರೂ, 'ರಾಮನಾಮ'ದ ಜಯ ಘೋಷವು ಕೇಳಬರಹತ್ತಿತು. ಆ ಸಾಧ್ವಿಗೆ ಆಶ್ಚರ್ಯವಾಯಿತು. ಮನೆಯಲ್ಲಿ ಯಾರು ಭಜನೆ ಮಾಡುತ್ತಿರಬಹುದು? ಎಂದು ಕೊಡವನ್ನಿಳಿಸಿ, ಧ್ವನಿಯು ಕೇಳಬರುವಲ್ಲಿಗೆ ಅಂದರೆ ಗಣಪತಿಯನ್ನು ಮಲಗಿಸಿದ ಕೋಣೆಗೆ ಹೋದಳು. ಕೋಣೆಯಲ್ಲಿ ಯಾರೂ ಇರದೆ, ತೊಟ್ಟಿಲಲ್ಲಿ ಮಲಗಿದ ಗಣಪತಿಯೇ ರಾಮನಾಮವನ್ನುಚ್ಚರಿಸುತ್ತಿರುವನೆಂಬದು ಆಕೆಗೆ ತಿಳಿಯ ಬಂದಿತು. ಪ್ರಿಯ ವಾಚಕರೇ ಆಗ ಆ ಸಾಧ್ವಿಗೆ ಹೇಗೆ ಆಗಿರಬೇಡ? ಒಂದು ವರುಷದ ಶಿಶುವೆಂದರೇನು! ರಾಮನಾಮದ ಜಯಘೋಷವನ್ನು ಮಾಡುವದೆಂದರೇನು! ತಲೆ ಬೆಳ್ಳಗಾಗುವವರೆಗೆ ಆಯುಷ್ಯವನ್ನು ಕಳೆದರೂ ರಾಮನಾಮವನ್ನು ಒಮ್ಮೆಯಾದರೂ ಉಚ್ಚರಿಸಬೇಕೆಂಬ ತಿಳುವಳಿಕೆಯಿಲ್ಲದವರು ಅಸಂಖ್ಯಜನರಿರುತ್ತಿರಲು, ಒಂದು ವರುಷದ ಮಗುವು ಭಗವದ್ಭಜನೆ ಮಾಡುವದೆಂದರೆ, ಯಾವ ತಾಯಿಗೆ ಆಶ್ಚರ್ಯವಾಗಲಿಕ್ಕಿಲ್ಲ! ತನ್ನ ಮಗನು ಮನುಷ್ಯನಾಗಿರದೆ, ದೇವಾಂಶಸಂಭೂತನಾದ್ದರಿಂದಲೇ ಈ ಮೇರೆಗೆ ರಾಮಭಜನೆಯನ್ನು ಮಾಡುವನು, ಎಂದು ಆ ಸಾಧ್ವಿಯು ನಿಶ್ಚಯಿಸಿದಳು; ಮತ್ತು ಆನಂದದ ಭರದಿಂದ ಮಗುವನ್ನು ಎತ್ತಿಕೊಳ್ಳ ಹೋದಳು. ತಾಯಿಯ ಮುಖವನ್ನು ನೋಡಿದಕೂಡಲೆ ಮಗುವು ರಾಮಭಜನೆಯನ್ನು ಬಿಟ್ಟು ಅಳುವದಕ್ಕಾರಂಭಿಸಿತು. ಪ್ರಿಯವಾಚಕರೇ, ನೋಡಿದಿರಾ, ಭಗವನ್ಮಾಯೆಯನ್ನು! ಅವತಾರಿಕರೂ ಕೂಡ ತಮ್ಮ ಅವತಾರದ ಕುರುಹನ್ನು ಪ್ರಸಿದ್ಧರೀತಿಯಿಂದ ಬೈಲಿಗಿಡಲು ಒಪ್ಪರು. ಇದಕ್ಕೆ ಕಾರಣವೇನಿರಬಹುದು?

ಗೀತಾಬಾಯಿಯು ಮಗುವನ್ನು ಎತ್ತಿಕೊಂಡು ಸ್ತನಪಾನ ಮಾಡಿಸಿದಳು. ಇಂಥ ಮಗುವನ್ನು ಹೆತ್ತ ಆ ಮಹಾತಾಯಿಯೇ ಧನ್ಯಳು. ಆ ಸಾಧ್ವಿಯು ಜಗತ್ತಿನ ತಾಯಿಯೇ ಎಂದು ಹೇಳಬಹುದು. ಮೊಲೆ ಕುಡಿದು ಗಣಪತಿಯು ಸಮಾಧಾನ ಹೊಂದಿದನು. ಗೀತಾಬಾಯಿಯು ಮನೆಗೆಲಸದಲ್ಲಿ ತೊಡಗಿದಳು ಹೀಗೆ ಮಗುವು ಒಂದೊಂದೇ ಲೀಲೆಗಳನ್ನು ಪ್ರಕಟಿಸುತ್ತ ಬಿದಿಗೆಯ ಚಂದ್ರನಂತೆ ಬೆಳೆಯಲಾರಂಭಿಸಿತು. ಮುಖದಲ್ಲಿ ಯಾವಾಗಲೂ ಉಲ್ಹಾಸಕಳೆಯು; ವರ್ಣವು ಶುದ್ಧ ಬಂಗಾರದಂತೆ ಇತ್ತು. ಅವಯವಗಳು ಪುಷ್ಟವಾದವು. ದೇಹವು ಯಾವಾಗಲೂ ನಿರ್ಮಲವಾಗಿಯೇ ಇರುತ್ತಿತ್ತು. ಇಂಥ ಸುಂದರ ಮಗುವನ್ನು ಪ್ರೀತಿಸದವರಾರು! ನೆರೆಹೊರೆಯ ಹೆಣ್ಣುಮಕ್ಕಳಂತೂ ಗಣಪತಿಯನ್ನು ಪ್ರತಿನಿತ್ಯ ಎತ್ತಿ ಮುದ್ದಾಡದೆ ಇರುತ್ತಿರಲಿಲ್ಲ. ಗಣಪತಿಯು ಯಾರು ಕರೆದರೂ ಒಲ್ಲೆನ್ನುತ್ತಿರಲಿಲ್ಲ. ಒಮ್ಮೊಮ್ಮೆ ಇಡಿ ದಿನವಾದರೂ ಹಡೆದ ತಾಯಿಗೇ ಮಗುವಿನ ಭೆಟ್ಟಿಯಾಗುತ್ತಿರಲಿಲ್ಲ. ಗೋಕುಲದಲ್ಲಿ ಶ್ರೀ ಕೃಷ್ಣನು ಸರ್ವ ಜನರಿಗೆ ಪ್ರಿಯನಾದಂತೆ ಗಣಪತಿಯು ಗೊಂದಾವಲಿಯಲ್ಲಿಯ ಸಮಸ್ತ ಜನರಿಗೂ ಪ್ರಿಯನಾಗಿದ್ದನು. ಜನರು ಆತನ ಅಗಾಧ ತೇಜಸ್ಸನ್ನು ನೋಡಿಯೇ ಬೆರಗಾಗಿ ಹೋಗುತ್ತಿದ್ದರು. ಹೀಗೆ ನಡೆಯುತ್ತಿರಲು ಮೂರು ವರ್ಷಗಳು ಕ್ರಮಿಸಿದವು.

ಗಣಪತಿಯು ಯಾವಾಗಲೂ ಅಜ್ಜನ ಬಳಿಯಲ್ಲಿಯೇ ಇರುತ್ತಿದ್ದನು. ತಂದೆಯು ಸರ್ವದಾ ಭಗವಧ್ಯಾನದಲ್ಲಿ ರತನಾಗಿರುತ್ತಿದ್ದದರಿಂದ ಲಿಂಗೋಪಂತರ ಬಳಿಯಲ್ಲಿರುವದೇ ಆ ಮಗುವಿಗೆ ಆನಂದವೆನಿಸುತ್ತಿತ್ತು. ಲಿಂಗೋಪಂತರು ಭಜನೆ ಮಾಡಹತ್ತಿದರೆ ತೊದಲ್‌ನುಡಿಯಿಂದ "ಲಾಮ ಕೃಷ್ಣ ಹಲಿ'' ಎಂದು ಗಣಪತಿಯು ಭಜನೆ ಮಾಡುತ್ತಿದ್ದನು. ಆತನ ಈ ಮಧುರ ಭಜನೆಯನ್ನು ಕೇಳಿ ನೆರೆದವರೆಲ್ಲರೂ ನಗುತ್ತಿದ್ದರು. ಗಣಪತಿಯು ತಾನು ಅವತಾರಿಕನಾಗಿದ್ದರೂ, ಮಕ್ಕಳು ಮನೆಯೊಳಗಿನ ಹಿರಿ

ಯರ ಅನುಕರಣಮಾಡುತ್ತಾರೆಂಬದನ್ನೂ ಹಿರಿಯರು ಸದಾಚಾರ ಪ್ರಿಯ ರಿದ್ದರೆ ಮಕ್ಕಳೂ ಸದಾಚಾರಿಗಳಾಗುವರೆಂಬದನ್ನು ಜಗತ್ತಿನ ನಿದರ್ಶನಕ್ಕೆ ತಂದುಕೊಡುವದಕ್ಕೋಸ್ಕರ ಅಜ್ಜನ ಅನುಕರಣವನ್ನೇ ಮಾಡುತ್ತಿದ್ದನು. ಅಜ್ಜನು ಭಜನೆ ಮಾಡಿದರೆ ತಾನು ಮಾಡುವನು, ನಮಸ್ಕಾರ ಹಾಕಿದರೆ ತಾನೂ ಹಾಕುವನು. ಜಪ ಮಾಡುತ್ತ ಕುಳಿತರೆ ತಾನೂ ಜಪ ಮಾಡು ವನು. ಪುರಾಣವನ್ನು ಓದಿದರೆ ಕೂತುಕೊಂಡು ಕೇಳುವನು. ಈ ರೀತಿ ಗಣಪತಿಯು ಕೇವಲ ಅಜ್ಜನ ಅನುಕರಣ ಮಾಡಿ ಜನರಿಗೆ ಆಶ್ಚರ್ಯ ವನ್ನುಂಟು ಮಾಡುತ್ತಿದ್ದನು. ಹೀಗಿರಲು ಒಂದು ದಿನ ಲಿಂಗೋಪಂತ ರು ನದಿಗೆ ಸ್ನಾನಾರ್ಥವಾಗಿ ಹೋದರು. ಅವರು ಸ್ನಾನ ಮಾಡಿ ಮನೆಗೆ ಬಂದರು ಆದರೆ ಗಣಪತಿಯು ಅವರ ಹಿಂದಿನಿಂದಲೇ ಹೋಗಿ ನದಿಯಲ್ಲಿ ಸ್ನಾನ ಮಾಡಹತ್ತಿದ್ದನ್ನು ಅವರು ನೋಡಿರಲಿಲ್ಲ. ಗಣಪತಿ ಯು ಸ್ನಾನ ಮಾಡಿ ಅಜ್ಜನ ಜೊತೆಗೆ ತಿರುಗಿ ಮನೆಗೆ ಬರಲಿಲ್ಲ. ಅಲ್ಲಿಯೇ ನದೀತೀರದಲ್ಲಿ ಧ್ಯಾನಸ್ಥನಾಗಿ ಕುಳಿತುಬಿಟ್ಟನು. ಇತ್ತ ಮನೆಯಲ್ಲಿ ಗಣ ಪತಿಯು ಎಲ್ಲಿಯೂ ಕಾಣದ್ದರಿಂದ ಸುತ್ತಲೂ ಹುಡುಕಿ ನೋಡಿದರು. ಆತನು ಯಾರ ಯಾರ ಮನೆಗೆ ಹೋಗಬಹುದಾಗಿತ್ತೋ ಆ ಮನೆಗಳ ನ್ನೆಲ್ಲ ಹುಡುಕಿ ನೋಡಿದರು. ಮನೆಯೊಳಗಿನ ಜನರೂ ನೆರೆಹೊರೆಯ ವರೂ ಕೂಡಿ ಊರ ತುಂಬೆಲ್ಲ ಶೋಧ ಮಾಡಿದರು. ಆದರೂ ಗಣಪತಿಯ ಸುದ್ದಿಯು ಹತ್ತಲಿಲ್ಲ. ಆಗ ಎಲ್ಲರೂ ಗಾಬರಿಯಾದರು. ತುಡುಗರು ಕರೆದುಕೊಂಡು ಹೋದರೋ ಮಗುವು ಕೆರೆ-ಬಾವಿಗಳಲ್ಲಿ ಬಿದ್ದಿತೋ ಎಂದು ಎಲ್ಲರೂ ಚಡಪಡಿಸಹತ್ತಿದರು. ಅರಗಳಿಗೆ ಬಿಟ್ಟಿರದ ಮಗುವು ಎಲ್ಲಿ ಹೋಗಿರಬಹುದು? ನಮ್ಮ ಪರಬ್ರಹ್ಮವು ಎಲ್ಲಿ ಮಾಯವಾಯಿತು! ನಮ್ಮ ಕುಲದೀಪವನ್ನು ಯಾರು ಅಪಹರಿಸಿದರು! ಎಂದು ಪಂತರು ಯೋಚನೆ ಮಾಡುತ್ತಿರುವಷ್ಟರಲ್ಲಿ ಒಬ್ಬ ಮುದುಕೆಯು ಬಂದು— ಅಪ್ಪಾ, ಯೋಚಿಸಬೇಡಿರಿ, ಗಣಪತಿಯು ನದಿಯ ತೀರದಲ್ಲಿ ಕುಳಿತಿಧ್ದ

ವನು. ನಾನು ಈಗಲೇ ನೋಡಿ ಬಂದಿರುವೆನು ಎಂದು ಹೇಳಿದಳು. ಒಣಗುವ ಪೈರುಗಳಿಗೆ ಮಳೆ ಬಂದಂತಾಯಿತು. ಮಂಕಾಗುವ ದೀಪಕ್ಕೆ ಎಣ್ಣೆಯನ್ನು ಹಾಕಿದಂತಾಯಿತು. ಲಿಂಗೋಪಂತರ ಮುಖವು ಹಿಗ್ಗಿ ಇಷ್ಟಗಲವಾಯಿತು. ಅವರು ಆ ಮುದುಕಿಯ ಬಾಯಿಯಲ್ಲಿ ಸಕ್ಕರೆ ಯನ್ನು ಹಾಕಿ ನದಿಯ ಕಡೆಗೆ ಹೊರಟರು. ಅವರನ್ನು ಹಿಂಬಾಲಿಸಿ ಸಮಸ್ತ ಜನರೂ ನಡೆದರು.

ನದೀತೀರದಲ್ಲಿ ಒಂದು ಸರಪಿನ ಮಟದ ತೆಗ್ಗಿನಲ್ಲಿ ಗಣಪತಿಯು ಧ್ಯಾನಸ್ಥನಾಗಿ ಕುಳಿತುಕೊಂಡಿದ್ದನು. ಅವನು ಕುಳಿತಲ್ಲಿ ಹುಲ್ಲು ವಿಶೇ ಷವಾಗಿ ಬೆಳೆದಿತ್ತು. ಆತನು ಪದ್ಮಾಸನ ಹಾಕಿಕೊಂಡು ಕಣ್ಣುಮುಚ್ಚಿ ಕುಳಿತಿದ್ದನು. ಅವನು ದೃಶ್ಯಸೃಷ್ಟಿಯನ್ನು ಲಕ್ಷಿಸುತ್ತಿರಲಿಲ್ಲ. ಹೃದ ಯಸ್ಥನಾದ ಪರಮಾತ್ಮನಲ್ಲಿಯೇ ಸ್ಥಿರಚಿತ್ತನಾಗಿ ಬ್ರಹ್ಮಾನಂದವನ್ನು ಅನುಭವಿಸುತ್ತಿದ್ದನು. ಹೀಗೆ ಮಹಾಯೋಗಿಯಂತೆ ಕುಳಿತ ಗಣಪತಿ ಯನ್ನು ನೋಡಿ ಸರ್ವರೂ ಆಶ್ಚರ್ಯಭರಿತರಾದರು. ಈತನು ಮನು ಷ್ಯನಲ್ಲ ಪ್ರತ್ಯಕ್ಷ ಯೋಗೀಶ್ವರನೇ ಈ ಬಾಲಕನ ವೇಷದಿಂದವತರಿಸಿರು ವನು ಎಂದು ಜನರು ಮಾತನಾಡಲಾರಂಭಿಸಿದರು. ಲಿಂಗೋಪಂತರು ಓಡಿಹೋಗಿ ಮಗುವಿನ ಮೈದಡವಿ ಅವನನ್ನು ಎಚ್ಚರಗೊಳಿಸಿದರು. ಗಣಪತಿಯು ಕಣ್ಣು ತೆರೆದು ದೃಶ್ಯಸೃಷ್ಟಿಯನ್ನು ನೋಡಿದನು; ಮತ್ತು ಏನೂ ಅರಿಯದವನಂತೆ ಅಜ್ಜಾ, ನನ್ನನ್ನು ಈ ಅಡವಿಯಲ್ಲೇಕೆ ಕರೆತಂ ದಿರುವೆ? ಎಂದು ಕೇಳಿದನು. ಲಿಂಗೋಪಂತರು ನಸುನಕ್ಕು ಮಗುವ ನ್ನೆತ್ತಿಕೊಂಡು ಮನೆಗೆ ಬಂದರು. ಗಣಪತಿಯ ಈ ಸಮಾಧಿಸ್ಥಿತಿಯನ್ನು ಪ್ರತ್ಯಕ್ಷ ನೋಡಿದವರು ಅಂದು ದಂಗುಬಡಿದು ಹೋದರು. ಊರ ತುಂಬ ಗಣಪತಿಯ ಸುದ್ದಿಯೇ ಸುದ್ದಿಯು!

ಹೀಗೆ ಗಣಪತಿಯು ಅನೇಕ ಲೀಲೆಗಳನ್ನು ನಡಿಸಿ ಗೋಂದಾವ ಲೆಯ ನಿವಾಸಿಗಳನ್ನು ಆನಂದಸಾಗರದಲ್ಲಿ ಮುಳುಗಿಸುತ್ತಿರಲು ಆತನಿಗೆ

ಆರು ವರುಷಗಳು ಕ್ರಮಿಸಿದವು. ಆಗ ಲಿಂಗೋಪಂತರು ಮೊಮ್ಮಗನನ್ನು ಕುರಿತು ಇಂತು ಬೋಧಮಾಡತೊಡಗಿದರು.—"ಮಗೂ, ಇನ್ನು ಮುಂದೆ ನೀನು ದೊಡ್ಡವನಾದೆ. ಹುಡುಗರು ಬಹಳದಿನಗಳವರೆಗೆ ಆಟದಲ್ಲಿ ಕಾಲಕಳೆಯಬಾರದು. ವಿದ್ಯಾಭ್ಯಾಸವನ್ನು ಮಾಡಬೇಕು. ವಿದ್ಯೆಯಿಂದ ಮುಂದೆ ಕೀರ್ತಿಯುಂಟಾಗುವದು. ವಿದ್ಯೆಯಿಂದ ಮನುಷ್ಯನಿಗೆ ಪರಮ ಅರ್ಥವು ದೊರಕುವದು. ಈಸಗಲಿತ ಮನುಷ್ಯನು ನೀರಲ್ಲಿ ಬಿದ್ದರೆ ಪಾರಾಗಿ ಬರುವಂತೆ ವಿದ್ಯಾವಂತನಾದ ಮನುಷ್ಯನು ಸಂಸಾರದಲ್ಲಿ ಸಹಜವಾಗಿ ಪಾರಾಗುವನು. ಆದ್ದರಿಂದ ಗಣಪತೀ, ನೀನು ವಿದ್ಯಾವಂತನಾಗು."

ಅಜ್ಜನ ಈ ಉಪದೇಶವನ್ನು ಕೇಳಿ ಗಣಪತಿಯು ನಕ್ಕನು. ಆದರೆ ಆತನ ಅಪ್ಪಣೆಯನ್ನು ಶಿರಸಾವಹಿಸಿ ವಿದ್ಯಾಭ್ಯಾಸವನ್ನು ಆರಂಭಿಸಿದನು. ಗಣಪತಿಯು ವಿದ್ಯಾಭ್ಯಾಸಮಾಡುವದೆಂದರೆ ವಿಚಿತ್ರಮಾತ್ರವೆಂಬುದನ್ನು ಹೇಳಲವಶ್ಯವಿಲ್ಲ. ಅವನು ಒಂದೇ ದಿನದಲ್ಲಿ ಧೂಳಾಕ್ಷರಗಳನ್ನೆಲ್ಲ ಕಲಿತು ಅಜ್ಜನಿಗೆ ತೋರಿಸಿದನು. ಆತನು ನಿರಾಯಾಸದಿಂದ ಪುಸ್ತಕಗಳನ್ನು ಕೂಡಾ ಓದಲಾರಂಭಿಸಿದನು. ಪಂತರಿಗೆ ಆಶ್ಚರ್ಯವಾಯಿತು; ಮೊಮ್ಮಗನು ಸಾಮಾನ್ಯನಲ್ಲವೆಂದು ಸ್ಮರಿಸಿ ಆತನನ್ನು ಅಪ್ಪಿಕೊಂಡರು. ಗಣಪತಿಯು ಅಲ್ಪಾವಕಾಶದಲ್ಲಿ ಪಂತರಲ್ಲಿದ್ದ ವಿದ್ಯೆಯನ್ನೆಲ್ಲ ಕಲಿತು ಮುಂದೇನು ಹೇಳುತ್ತೀ ಎಂದು ಕೇಳತೊಡಗಿದನು. ಆಗ ಪಂತರು ಒಬ್ಬ ಯೋಗ್ಯ ಶಿಕ್ಷಕನನ್ನು ಮೊಮ್ಮಗನ ಶಿಕ್ಷಣಕ್ಕಾಗಿ ನೇಮಿಸಿದರು. ಪಾಪ ಆ ಬಡ ಶಿಕ್ಷಕನು ಇಂಥ ಅವತಾರಿಕನಿಗೆ ಶಿಕ್ಷಣವನ್ನು ಏನು ತಾನೇ ಕೊಡಬಲ್ಲನು? ಆತನು ಗಣಪತಿಯ ಪಾಂಡಿತ್ಯವನ್ನು ನೋಡಿ ಪ್ರಥಮದಲ್ಲಿಯೇ ರಾಜೀನಾಮೆಯನ್ನು ಕೊಟ್ಟನು. ಗಣಪತಿಯು ಅಧ್ಯಯನ ಮಾಡದಿದ್ದರೂ ಮಾಡಿದವರಂತೆ ಸರ್ವ ವಿದ್ಯಾಪಾರಂಗತನಿರುವನೆಂಬುದು ಪಂತರಿಗೆ ಮನವರಿಕೆಯಾಯಿತು. ವಿದ್ಯಾಭ್ಯಾಸದ ಕಾಟವು ತಪ್ಪಲು ಗಣ

ಪತಿಗೆ ಆಟಕ್ಕಾಗಿ ಹುರುಪು ಬಂದಿತು. ಆತನು ಒಮ್ಮೊಮ್ಮೆ ತಮ್ಮ ಒಕ್ಕಲತನದ ಆಳುಗಳ ಸಂಗಡ ಹೊಲಕ್ಕೆ ಹೋಗುತ್ತಿದ್ದನು. ಒಮ್ಮೊಮ್ಮೆ ಗೆಳೆಯರೊಡನೆ ದನ-ಕರುಗಳನ್ನು ಮೇಸುವದಕ್ಕೆ ಹೋಗುತ್ತಿದ್ದನು. ಎಲ್ಲಿಗೆ ಹೋದರೂ ಆತನ ಆಟದ ಪದ್ಧತಿಯೇ ಬೇರೆಯಾಗಿತ್ತು. ಉಳಿದ ಆಟಗುಳಿ ಹುಡುಗರಂತೆ ಚಿಣಿ-ಫಣಿ-ಗುಂಡು-ಗಜಗ ಮುಂತಾದ ಆಟ ಗಳನ್ನಾಡುತ್ತಿದ್ದಿಲ್ಲ. ಗೆಳೆಯರೊಂದಿಗೆ ಹಲವು ತರದ ಹೂಗಳನ್ನು ಹರಿದು ತರುತ್ತಿದ್ದನು. ಬಳಿಕ ಒಂದು ಕಲ್ಲನ್ನು ಸ್ಥಾಪಿಸಿ ಅದಕ್ಕೆ ಶ್ರೀ ರಾಮ ಎಂದು ಹೆಸರಿಡುತ್ತಿದ್ದನು. ಅದರ ಹತ್ತರವೇ ಮತ್ತೊಂದು ಕಲ್ಲಿಟ್ಟು ಅದಕ್ಕೆ ಲೋಕಜನನಿಯಾದ ಸೀತಾ ಎಂದು ಹೆಸರಿಡುತ್ತಿದ್ದ ನು. ಇನ್ನೊಂದು ಕಲ್ಲನ್ನು ಸ್ಥಾಪಿಸಿ ಅದಕ್ಕೆ ಲಕ್ಷ್ಮಣನೆಂದೂ ನಾಲ್ಕ ನೆಯ ಕಲ್ಲನ್ನು ಆ ಮೂರೂ ಕಲ್ಲುಗಳ ಮುಂದಿಟ್ಟು ಅದಕ್ಕೆ ಮಾರುತಿ ಯೆಂದು ಕರೆಯುತ್ತಿದ್ದನು. ಬಳಿಕ ಆತನು ಆ ದೇವರನ್ನು ಷೋಡ ಶೋಪಚಾರದಿಂದ ಪೂಜಿಸುತ್ತಿದ್ದನು. ಅಡವಿಯೊಳಗಿನ ಹುಡಿ, ಹರಳು, ಗಿಡಗಂಟೆಗಳ ಎಲೆಗಳು, ಅಡವಿಯ ಕಾಡ ಹೂಗಳು ಇವೇ ಆತನ ಪೂಜೆಯ ಉಪಕರಣಗಳು; ಪೂಜೆಯು ಮುಗಿದ ಬಳಿಕ ಎಲ್ಲರೊಡನೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡುತ್ತಿದ್ದನು. ಬಳಿಕ ಎಲ್ಲರಿಗೂ ಶ್ರೀರಾಮನಾಮದ ಜಯಘೋಷವನ್ನು ಮಾಡಲಿಕ್ಕೆ ಹೇಳುತ್ತಿದ್ದನು. ಆ ಗೋಪಾಲಕರ ಜಯಘೋಷದಿಂದ ಆ ಅರಣ್ಯವೆಲ್ಲ ಶ್ರೀರಾಮನಾದಮ ಯವಾಗುತ್ತಿತ್ತು. ಹುಡುಗರು ಬಹು ಆನಂದದಿಂದ ರಾಮಭಜನೆಯನ್ನು ಮಾಡುತ್ತಿದ್ದರು. ಗಣಪತಿಯಂತೂ ರಾಮ-ರಾಮ ಎಂದು ಉಚ್ಚರಿ ಸುತ್ತ ಪ್ರೇಮರತು ಕುಣಿಯುತ್ತಿದ್ದನು. ಇಂತು ಆತನ ರಾಮಭಕ್ತಿಯ ಪ್ರಭಾವವು ಬಾಲ್ಯದಲ್ಲಿಯೇ ಹಬ್ಬಿ ಹೊರಬೀಳಲಾರಂಭಿಸಿತು. ತುಸ ದಿನಗಳಲ್ಲಿ ಗೋಪಾಲಕರೆಲ್ಲರೂ ರಾಮಭಕ್ತರಾದರು.

## ೪ ನೆಯ ಅಧ್ಯಾಯ—ಮೌಂಜೀಬಂಧನ ಹಾಗು ವಿವಾಹ.

ಈ ಪ್ರಕಾರ ಗಣಪತಿಯು ಹಲವು ಬಾಲಲೀಲೆಗಳನ್ನು ತೋರ್ಪಡಿಸುತ್ತಿರಲು, ಏಳನೆಯ ವರುಷವು ಪ್ರಾಪ್ತವಾಯಿತು. ಗರ್ಭಾಷ್ಟಮದಲ್ಲಿ ಉಪನಯನ ಮಾಡುವದು ಶಾಸ್ತ್ರವಿಹಿತವಾದ್ದರಿಂದ ಲಿಂಗೋಪಂತರು ಮೊಮ್ಮಗನ ಮೌಂಜೀಬಂಧನ ಮಾಡಬೇಕೆಂದು ನಿಶ್ಚಯಿಸಿದರು. ಆಗ ಅವರು ತಮ್ಮ ಕುಲಪುರೋಹಿತರನ್ನು ಕರೆಯಿಸಿ ಉತ್ತಮವಾದ ಮುಹೂರ್ತವನ್ನು ತೆಗೆಯಿಸಿದರು, ಲಿಂಗೋಪಂತರು ಕರ್ಮಶೀಲರಾದ್ದರಿಂದ ಅವರಿಗೆ ಯಾವದೊಂದು ಕೆಲಸವು ಪದ್ಧತಿಯಂತೆ ಸಾಂಗವಾಗುವದೇ ಹೆಚ್ಚು ಸೇರುತ್ತಿತ್ತು. ಪಂತರ ಮೊಮ್ಮಗನ ಉಪನಯನವೆಂದ ಬಳಿಕ ಕೇಳುವದೇನು? ಸುತ್ತಮುತ್ತಲಿನ ಬ್ರಾಹ್ಮಣರೆಲ್ಲರೂ ನೆರೆದರು. ಆಪ್ತರಿಂದಲೂ ಇಷ್ಟಮಿತ್ರರಿಂದಲೂ ಪಂತರ ಮನೆಯು ತುಂಬಿಹೋಯಿತು. ಪುರೋಹಿತರು ತೆಗೆದುಕೊಟ್ಟ ಶುಭ ಮುಹೂರ್ತದಲ್ಲಿ ಗಣಪತಿಯ ಮೌಂಜೀಬಂಧನವಾಯಿತು., ಮೊದಲೇ ಚಲುವನಾದ ಗಣಪತಿಯು ಬ್ರಹ್ಮತೇಜಸ್ಸಿನಿಂದ ಒಪ್ಪತೊಡಗಿದನು. ಮೇಖಲಾ ಅಜಿನಗಳು ಅವನ ದೇಹಕ್ಕೆ ಭೂಷಣಪ್ರದವಾದವು, ಆ ಬಾಲವಟುವನ್ನು ನೋಡಿ ಎಲ್ಲರೂ ಕೌತುಕಪಡಹತ್ತಿದರು. ನಾಲ್ಕು ದಿನಗಳವರೆಗೆ ಬ್ರಾಹ್ಮಣಭೋಜನವಾಯಿತು. ಲಿಂಗೋಪಂತರಿಗೆ ಬ್ರಾಹ್ಮಣ ಭೋಜನದಲ್ಲಿ ಪ್ರೇಮ ಬಹಳ; ಶುಕ್ಲಯಜುರ್ವೇದೀಯ ಬ್ರಾಹ್ಮಣರು ಅನ್ನದಾನಪ್ರಿಯರು. ಅಂತೆಯೇ ಈ ಶಾಖೆಯವರಿಗೆ 'ವಾಜಸನಿ' ಎಂಬ ಹೆಸರು ಬಂದಿದೆ. ಮೂಲತಃ ಅನ್ನದಾನ ಪ್ರಿಯರಾದ ಲಿಂಗೋಪಂತರಿಗೆ ಮೊಮ್ಮಗನ ಮೌಂಜೀಬಂಧನದಂಥ ಸಮಾರಂಭವು ಬಂದ ಬಳಿಕ ಕೇಳುವದೇನು? ಅವರ ಅನ್ನಸಂತರ್ಪಣೇಚ್ಛೆಯು ದ್ವಿಗುಣಿತವಾಯಿತು. ಮನಸ್ಸು ದಣಿ

ಯುವವರೆಗೆ ಬ್ರಾಹ್ಮಣ ಸಂತರ್ಪಣೆಯನ್ನು ಮಾಡಿದರು. ಸಮಸ್ತ ಜಾತಿಯ ಜನರೂ ಆಕಂಠಪರ್ಯಂತರವಾಗಿ ಉಂಡು ತೃಪ್ತರಾದರು.

ಮೌಂಜೀಬಂಧನದಿಂದ ದ್ವಿಜತ್ವವು ಪ್ರಾಪ್ತವಾದ್ದರಿಂದ ಗಣಪತಿಯು ವೇದಾಧ್ಯಯನಕ್ಕೆ ಅರ್ಹನಾದನು. ಮೊಮ್ಮಗನು ವೈದಿಕ ಶಿಕ್ಷಣ ಹೊಂದಬೇಕೆಂಬ ಲವಲವಿಕೆಯು ಲಿಂಗೋಪಂತರಲ್ಲಿ ವಿಶೇಷವಾಗಿತ್ತು. ಆದ್ದರಿಂದ ಅವರು ಒಬ್ಬ ವೈದಿಕ ಪಂಡಿತನನ್ನು ಮೊಮ್ಮಗನ ಶಿಕ್ಷಣಕ್ಕೆ ನೇಮಿಸಿದರು, ಗಣಪತಿಯು ಆ ಪಂಡಿತರ ಮುಂದೆ ಕುಳಿತು ಸಂಧ್ಯಾವಂದನ, ಬ್ರಹ್ಮಯಜ್ಞ, ದೇವಪೂಜೆ, ವೈಶ್ವದೇವ ಮೊದಲಾದ ನಿತ್ಯ ಕರ್ಮದ ಎಲ್ಲ ಮಂತ್ರಗಳನ್ನು ಅಂದು ತೋರಿಸಿದ್ದಲ್ಲದೆ, ಸಂಹಿತೆಯೊಳಗಿನ ಕೆಲವು ಅಧ್ಯಾಯಗಳನ್ನೂ ಅಂದು ತೋರಿಸಿದನು. ಪಂಡಿತನು ಬೆರಗಾದನು. ಈತನಿಗೆ ನಾನು ಕಲಿಸತಕ್ಕದ್ದಿನ್ನೇನು? ಎಂದು ನುಡಿದು ಪಂತರಿಗೆ ನಡೆದ ಸಂಗತಿಯನ್ನೆಲ್ಲ ಹೇಳಿದನು. ಪಂತರು ಮನಸ್ಸಿನಲ್ಲಿ--- "ಗಣಪತಿಯು ದೇವಾಂಶನೆಂಬದು ಬಾರಿಬಾರಿಗೂ ನನ್ನ ಅನುಭವಕ್ಕೆ ಬರುತ್ತಿದ್ದರೂ ಮತ್ತೆ ಮೋಸಹೋಗುವೆನಲ್ಲ. ಇದೆಂಥ ಅಜ್ಞಾನವು? ಭಗವನ್ಮಾಯೆಯು ಅಗಾಧವಿದ್ದದರಿಂದಲೇ ನನಗೆ ಹೀಗೆ ಭ್ರಾಂತಿಯುಂಟಾಗುತ್ತದೆ. ದಯಾಘನನಾದ ಪರಮಾತ್ಮನೇ ನಿನಗೆ ನಮಸ್ಕಾರವು" ಎಂದು ಅಂದುಕೊಂಡು ಪಂಡಿತರಿಗೆ ಮನೆಗೆ ಹೋಗಲು ಅಪ್ಪಣೆಕೊಟ್ಟರು.

ಗಣಪತಿಯು ವಿದ್ಯಾಧರನಂತೆ ವಿದ್ಯಾವಿಶಾರದನೇ ಆಗಿದ್ದನು. ಆತನು ತಪ್ಪದೆ ಸ್ನಾನ-ಸಂಧ್ಯಾದಿಗಳನ್ನು ಆಚರಿಸುತ್ತ ಅಜ್ಜನ ಮನಸ್ಸನ್ನು ಸಂತೋಷಪಡಿಸುತ್ತಿದ್ದನು. ಹೀಗಿರಲು ಗಣಪತಿಯು ಸ್ವಲ್ಪ ದೊಡ್ಡವನಾದನು. ಬಾಲ್ಯಾವಸ್ಥೆಯು ಮುಗಿಯುತ್ತ ಬಂದಿತು. ಆತನು ಆಟ-ನೋಟಗಳನ್ನೆಲ್ಲ ಬಿಟ್ಟುಕೊಟ್ಟು ಭಗವಚ್ಚಿಂತನದಲ್ಲಿಯೇ ಕಾಲಕಳೆಯಲಾರಂಭಿಸಿದನು. ಲೋಕದಲ್ಲಿ ಹುಟ್ಟಿ ಬಂದ ಮಾನವರಿಗೆ ಸದ್ಗುರು ಕೃಪೆಯು ಬೇಕು. ಸದ್ಗುರುಕೃಪೆಯಿಲ್ಲದವನ ಬಾಳು ವ್ಯರ್ಥವು. ಯಾ-

ವನು ಸದ್ಗುರುವಿನ ಚರಣ ದರ್ಶನವನ್ನು ಹೊಂದಿಲ್ಲವೋ ಯಾವನು ಸದ್ಗುರುವಿನಿಂದ ಅನುಗ್ರಹೀತನಾಗಿಲ್ಲವೋ ಅವನ ಜನ್ಮಕ್ಕೆ ಧಿಃಕಾರವು; ಮನುಷ್ಯಜನ್ಮದ ನಿಜವಾದ ಸಾರ್ಥಕತೆಯು ಸದ್ಗುರುಸೇವೆಯಲ್ಲಿರುತ್ತದೆಯೇ ಹೊರತು ಮತ್ಯಾತರಲ್ಲಿಯೂ ಇಲ್ಲ ಎಂಬ ವಿಚಾರಗಳು ಆತನ ಮನಸ್ಸಿನಲ್ಲಿ ಬರತೊಡಗಿದವು. ಸದ್ಗುರು ಪಾದಾರವಿಂದಗಳನ್ನು ಶೋಧಿಸುವದರ ಕಡೆಗೇ ಆತನ ಮನಸ್ಸು ಆತುರಪಡಲಾರಂಭಿಸಿತು. ಅವನು ಜನರ ಕೂಡ ನೆಟ್ಟಗೆ ಮಾತಾಡದಾದನು. ಅಡವಡವಿ ತಿರುಗತೊಡಗಿದನು. ಗಣಪತಿಯು ಸ್ವಭಾವದಲ್ಲಿ ಹೀಗೆ ಒಮ್ಮಿಂದೊಮ್ಮೆ ಹೆಚ್ಚುಕಡಿಮೆಯಾದದ್ದನ್ನು ತಿಳಿದು ಲಿಂಗೋಪಂತರು ಸ್ವಲ್ಪ ಅಸಮಾಧಾನ ತಾಳಿದರು. ಆಗ ಅವರಿಗೆ ವೃದ್ಧಾಪ್ಯದೆಸೆಯು ಪ್ರಾಪ್ತವಾಗಿತ್ತು. ಕಿವಿ ಕಣ್ಣುಗಳು ಮಂದವಾಗಿದ್ದವು. ಕಾಲುಗಳು ನಡೆಯಲಿಕ್ಕೆ ಅಸಮರ್ಥವಾಗಿದ್ದವು. ಹೀಗೆ ಪಂತರ ಸ್ಥಿತಿಯಾಗಿರಲು, ಮಗನು ಉದಾಳನಾಗುವನೆಂದು ಗೀತಾಬಾಯಿಯು ಚಡಪಡಿಸತೊಡಗಿದಳು. ಸಂಸಾರಿಕರಿಗೆ ಸಂಸಾರ ಬೆಳೆಯಬೇಕೆಂಬ ಬವಲವಿಕೆಯೇ ಇರುತ್ತದಲ್ಲದೆ ಪರಮಾರ್ಥದ ಕಡೆಗೆ ಅವರ ಲಕ್ಷ್ಯವು ಇರುವದಿಲ್ಲ. ಅದರಂತೆ ಗೀತಾಬಾಯಿಯ ಸ್ಥಿತಿಯೂ ಇತ್ತು. ಆಕೆಯು ಮಗನ ಲಗ್ನ ಮಾಡಬೇಕು. ಮೊಮ್ಮಕ್ಕಳನ್ನು ಕಾಣಬೇಕು ಎಂದು ಹಾತೊರೆಯುತ್ತಿದ್ದಳು. ಆ ಸಾಧ್ವಿಯು ಈ ಬಯಕೆಯು •ಗಣಪತಿಯು ಬ್ರಹ್ಮಚಿಂತನದಿಂದ ಕೈಗೂಡದೆಂಬದು ತಿಳಿಯಲು ಆಕೆಯು ಯೋಚಿಸಲಿಕ್ಕಾರಂಭಿಸಿದಳು. ಲಿಂಗೋಪಂತರ ಹಾಗು ಗೀತಾಬಾಯಿಯ ಅಭಿಪ್ರಾಯವು ಒಂದೇ ಆಯಿತು. ಗಣಪತಿಯನ್ನು ಹೀಗೆ ಬಿಟ್ಟುಬಿಟ್ಟರೆ ಅವನು ಕೈಗೆ ಹತ್ತದೆ ಹೋಗುವನೆಂದು ಅವರು ನಿರ್ಧರಿಸಿದರು. ಹಾಗಾದರೆ ಆತನನ್ನು ಮನೆಯಲ್ಲಿರಿಸಬೇಕಾದರೆ ಮೊದಲು ಆತನ ಲಗ್ನ ಮಾಡಬೇಕು. ಲಗ್ನವಾದ ಹೊರತು ಗಂಡುಹುಡುಗರ ಬುದ್ಧಿಯು ಸ್ವಾಧೀನಕ್ಕೆ ಬರುವದಿಲ್ಲ. ಎಂದು ನಿಶ್ಚಯಿಸಿದರು. ವಾಸ್ತವವಾಗಿ ನೋಡಿದರೆ ಮದು

ವೆಯು ಒಂದು ಬಗೆಯ ಪ್ರಾಪಂಚಿಕ ಬೇಡಿಯೇ ಸರಿ. ಆಯುರ್ಮಾನವು ತೀರುವವರೆಗೆ ಒಂದು ಜೀವಕ್ಕೆ ಮತ್ತೊಂದು ಜೀವವು ಗಂಟುಬೀಳುವ ದೆಂದರೆ ಇದೇನು ಸಾಮಾನ್ಯ ಬೇಡಿಯೇ? ಇಂಥ ಅಸಾಧಾರಣ ಬೇಡಿ ಯನ್ನು ಹಾಕಿ ಗಣಪತಿಯನ್ನು ಸಂಸಾರದಲ್ಲಿ ಪ್ರತಿಬಂಧಿಸಬೇಕೆಂದು ಲಿಂಗೋಪಂತರೂ ಗೀತಾಬಾಯಿಯೂ ನಿಶ್ಚಯಿಸಿದರು. ಅವರ ಈ ನಿಶ್ಚಯಕ್ಕನುಸಾರವಾಗಿ ಆ ಕಾಲಕ್ಕೆ ಒಬ್ಬ ಗೃಹಸ್ಥನು ಅವರ ಮನೆಗೆ ವರಾರ್ಥಿಯಾಗಿ ಬಂದು ಬಿಟ್ಟನು.

ಶ್ರೀಮಂತ ವರಗಳಿದ್ದರೆ ಕನ್ಯಾಪಿತೃಗಳು ಅವರ ಮನೆಗೆ ಒಂದೇ ಸವನೆ ಎಡತಾಕುವರು. ಬಡವರಗಳು ಕಣ್ಣೆದುರಿಗೆ ಯಥೇಷ್ಟವಾಗಿ ದ್ದರೂ ಅವನ್ನು ಯಾರೂ ಮಾತಾಡಿಸುವದಿಲ್ಲ; ಇದೊಂದು ಲೋಕ ವಾಡಿಕೆಯೇ ಆಗಿ ಹೋಗಿದೆ. ಲಿಂಗೋಪಂತರ ಕಾಲಕ್ಕಾದರೂ ಈ ರೂಢಿಯು ಪ್ರಚಾರದಲ್ಲಿತ್ತು. ಆದ್ದರಿಂದಲೇ ಅವರ ಮನೆಗೆ ಕನ್ಯಾಪಿ ತೃಗಳು ಎಡತಾಕಲಾರಂಭಿಸಿದ್ದರು.

ಲಿಂಗೋಪಂತರ ಮನೆಗೆ ವರಾರ್ಥಿಯಾಗಿ ಬಂದ ಗೃಹಸ್ಥನ ಹೆಸರು ಸಂಭಾಜಿಮಲ್ಹಾರೆ ಎಂಬದಿತ್ತು. ಆತನು ವತನದಾರ ಕುಲಕರ್ಣಿಯಾಗಿ ದ್ದನು. ಆತನ ಊರು ಖಾತವಳ ಎಂಬದು; ಗೊಂದಾವಲಿಯಿಂದ ೧೨ ಮೈಲುಗಳ ಅಂತರದಲ್ಲಿತ್ತು. ಪರಸ್ಪರರ ಮನೆತನಗಳ ಸ್ಥಿತಿಗತಿಯು ಪರಸ್ಪರರಿಗೆ ವಿದಿತವಿತ್ತು. ಆಗ ಲಿಂಗೋಪಂತರು ಮನಸ್ಸಿನಲ್ಲಿ ಆಲೋ ಚಿಸಿದ್ದೇನಂದರೆ—ಈ ಗೃಹಸ್ಥನು ಅನಾಯಾಸವಾಗಿ ಒಂದಿರುವನು. ಈತನ ಕನ್ನಿಕೆಯು ಸಲಕ್ಷಣವಿರುವದು. ಶರೀರ ಸಂಬಂಧಮಾಡಬೇಕಾ ದರೆ ಗುರ್ತಿನ ಸ್ಥಳದಲ್ಲಿ ಮಾಡಬೇಕು. ಗುರ್ತಿಲ್ಲದ ದೂರದ ಸ್ಥಳದಲ್ಲಿ ಮಾಡಬಾರದು. ಇದರಿಂದ ಪರಸ್ಪರರ ಸ್ವಭಾವಜ್ಞಾನವಿಲ್ಲದೆ ಬಹಳ ಗೊಂದಲವಾಗುವದು. ಜಗಳಾಡುವ ಪ್ರಸಂಗವು ಬರುವದು. ಮದು ವೆಯಂಥ ಶುಭಕಾರ್ಯದಲ್ಲಿ ಪರಸ್ಪರರು ಜಗಳಾಡುವದೂ ಮೋರೆಕರ್ರಗೆ

ಮಾಡುವದೂ ಅಪ್ರಶಸ್ತವು. ಇದರಿಂದ ವಧೂವರರಿಗೆ ಅಮಂಗಲವಾಗು ವದು. ಆದ್ದರಿಂದ ಸಂಭಾವಿತರನ್ನು ನೋಡಿ ಶರೀರಸಂಬಂಧ ಮಾಡ ಬೇಕು. ನಗುತ್ತ ಕೆಲೆಯುತ್ತ ಪೂರ್ಣ ಸಂತೋಷದಿಂದ ಸಮಾರಂಭ ವನ್ನು ನೆರವೇರಿಸಬೇಕು. ಸಂಭಾಜಿಮುಲ್ಲಾರೆಯು ಸಂಭಾವಿತನಿರು ವನು. ಈತನೊಡನೆ ಶರೀರಸಂಬಂಧ ಮಾಡುವದು ನಮಗೆ ಶ್ರೇಯಸ್ಕ ರವು. ಯಾವದಕ್ಕೂ ಜಗಳಬರುವಹಾಗಿಲ್ಲ. ಎಂದು ಯೋಚಿಸಿ ಸಂ- ಭಾಜಿಮುಲ್ಲಾರೆಯುವರನ್ನು ಹತ್ತರ ಕರೆದು ಜ್ಯೋತಿಷಿಗಳನ್ನು ಕರೆಯಿಸಿ ಘಟಿತಾರ್ಥವನ್ನು ನೋಡಿಸಲು ೩೨ ಗುಣಗಳು ಕೂಡಿ ಬಂದವು. ಆಗ ಲಿಂಗೋಪಂತರಿಗೂ ಸಂಭಾಜಿಮುಲ್ಲಾರೆಯುವರಿಗೂ ಪರಮಾನಂದವಾ ಯಿತು. ಯಾಕಂದರೆ ಉಭಯತರ ಮನಸ್ಸಿನಲ್ಲಿ ಶರೀರಸಂಬಂಧ ಮಾಡ ಬೇಕೆಂದು ಉತ್ಕಟೇಚ್ಛೆ ಉಂಟಾದಾಗ ಒಮ್ಮೊಮ್ಮೆ ಜ್ಯೋತಿಷವು ವಿಘ್ನ ವಾದರೆ ನೊಣತಿಂದ ಹಾಗಾಗುವದು. ಇಬ್ಬರೂ ಮನಸ್ಸಿನಲ್ಲಿಯೇ ಚಡಪ ಡಿಸುತ್ತ ಕೂಡ್ರಬೇಕಾಗುವದು. ಇಂಥ ಪ್ರಸಂಗವು ತಪ್ಪಿದ್ದರಿಂದ ಆ ಉಭ ಯತರಿಗೂ ಆನಂದವಾಯಿತು.

ಘಟಿತಾರ್ಥವು ಕೂಡಿಬಂದದ್ದರಿಂದ ಲಿಂಗೋಪಂತರೂ ಸಂಭಾಜಿ ಯುವರೂ ಕೊಡ-ತಕ್ಕೊಳ್ಳುವ ವಿಷಯದಲ್ಲಿ ಮಾತುಕಥೆಗಳನ್ನಾಡಿದರು. ಲಿಂಗೋಪಂತರು ಕನ್ಯೆಯನ್ನು ತಮ್ಮ ಮೊಮ್ಮಗನಿಗೆ ಮಾಡಿಕೊಳ್ಳಲು ಒಪ್ಪಿಕೊಂಡರು. ಲಗ್ನ ಮುಹೂರ್ತ ನಿಶ್ಚಯವೂ ಆಯಿತು.

ಈ ಯಾವ ಸಂಗತಿಗಳೂ ಗಣಪತಿಗೆ ಗೊತ್ತಿರಲಿಲ್ಲ. ಆತನು ಸದ್ಗುರು ಶೋಧಾರ್ಥವಾಗಿ ಅಲ್ಲಲ್ಲ ಅಲೆದಾಡುತ್ತಿದ್ದನು. ಪಂತರು ಮೊಮ್ಮಗನನ್ನು ಆಳುಗಳಿಂದ ಮನೆಗೆ ಕರೆಯಿಸಿಕೊಂಡು ಆತನಿಗೆ ಸದು ಪದೇಶವನ್ನು ಮಾಡಿದರು. "ತಮ್ಮಾ, ಹೀಗೆ ಅಡವಡವಿ ತಿರುಗಬೇಡ. ಇನ್ನು ನಿನ್ನ ಲಗ್ನಮಾಡುವೆನು; ಹೆಂಡತಿಯು ಮನೆಗೆ ಬರುವಳು. ನೀನು ಇನ್ನೂ ಹುಡುಗನಿದ್ದರೂ ಕೇವಲ ಅಜ್ಞಾನಿಯಾಗಿರುವದಿಲ್ಲ. ಇಷ್ಟು

ಬೇಗನೆ ನಿನ್ನ ಮದುವೆಮಾಡಬಾರದೆಂದು ನನ್ನ ಮನಸ್ಸಿನಲ್ಲಿತ್ತು. ಆದರೆ ಏನು ಮಾಡಲಿ? ನನಗೆ ವೃದ್ಧಾಪ್ಯದೆಸೆಯು ಬಂದಿದೆ; ನಾನು ಇನ್ನು ಬಹಳ ದಿವಸ ಬದುಕಲಾರೆನು. ನಾನು ಇರುವಾಗಲೇ ನಿನ್ನ ತಲೆಯ ಮೇಲೆ ಅಕ್ಷತೆಹಾಕಬೇಕೆಂದು ನನ್ನ ಮನಸ್ಸು ಹಾತೊರೆಯುತ್ತದೆ. ಮೇಲಾಗಿ ನಿನ್ನ ತಾಯಿಯ ಇಚ್ಛೆಯೂ ಇರುತ್ತದೆ. ನನ್ನ ಪಶ್ಚಾತ್ ನಿನ್ನ ಲಗ್ನವಾಗುವದು ಅಶಕ್ಯವಿರುತ್ತದೆ; ನಿನ್ನ ತಂದೆಯು ಮೂರ್ತಿಮಂತ ವೈರಾಗ್ಯಸ್ವರೂಪನು. ಆತನು ಜೀವನ್ಮುಕ್ತದೆಸೆಯಲ್ಲಿರುವನು, ನಿನ್ನ ತಾಯಿಯು ಹೆಣ್ಣುಮಗಳು; ಅಂವಬಳಿಕ ನಿನ್ನ ಲಗ್ನವನ್ನು ಸಮಾರಂಭ ದಿಂದ ಯಾರು ಮಾಡಬೇಕು? ಅದಕ್ಕಾಗಿಯೇ ನಾನೀಗ ನಿನ್ನ ಲಗ್ನವನ್ನು ನಿಶ್ಚಯಿಸಿದ್ದೇನೆ. ಮನೆಯಲ್ಲಿ ಬೇಕಾದಷ್ಟು ಐಶ್ವರ್ಯವಿದ್ದರೂ ಅದನ್ನು ಉಪಭೋಗಿಸುವವರಾರು? ಆದ್ದರಿಂದ ನೀನು ಭ್ರಾಂತಿಷ್ಟನಂತೆ ಆಡ್ಡಾ ಡಬೇಡ. ಮನೆಹಿಡಿದುಕೊಂಡಿರು. ಮನೆತನದ ಎಲ್ಲ ವ್ಯವಹಾರಗಳ ತಿಳ ವಳಿಕೆಯನ್ನು ಮಾಡಿಕೋ; ನನ್ನ ಪಶ್ಚಾತ್ ಮನೆತನವನ್ನು ನಡಿಸತಕ್ಕ ವನು ನೀನೇ; ನಿನ್ನ ತಂದೆಯು ಯಾವ ಉಪಯೋಗಕ್ಕೂ ಬರುವದಿಲ್ಲ. ನಾನು ಹೇಳಿದ್ದು ನಿನ್ನ ಮನಸ್ಸಿಗೆ ಬಂದಿತೋ ಇಲ್ಲವೋ? ಇನ್ನು ಮುಂದೆ ಮನೆ ಯಲ್ಲಿರುವೆಯಾ?''

ಈ ಮೇರೆಗೆ ಅಜ್ಜನು ಸದುಪದೇಶ ಮಾಡಿ ಪ್ರಶ್ನಮಾಡಲು ಗಣಪ ತಿಯು ಮನದಲ್ಲಿಯೇ ನಕ್ಕು—ಅಜ್ಜಾ, ನಿನ್ನ ಅಪ್ಪಣೆಯೇ ನನಗೆ ಮಾನ್ಯವು. ನೀನು ಲಗ್ನ ಮಾಡುತ್ತೀನೆಂದರೆ ನಾನು ಬೇಡವೆಂದು ಯಾಕೆ ಹೇಳಲಿ? ನಿನ್ನ ಮನಸ್ಸಿಗೆ ಬಂದಹಾಗೆ ಮಾಡು ಎಂದು ನುಡಿದು ಅಜ್ಜ ನಿಗೆ ನಮಸ್ಕಾರ ಮಾಡಿ ಒಳಗೆ ಹೋದನು. ಬಳಿಕ ಗಣಪತಿಯು ಒಂದು ಕೋಣೆಯಲ್ಲಿ ಕುಳಿತು—ಇದೇನು, ನಮ್ಮ ಅಜ್ಜಂದಿರು ಈಗಲೇ ನನ್ನ ಲಗ್ನ ಮಾಡಬೇಕೆಂದು ಮಾಡಿರುವರಲ್ಲ? ನಾನು ನನ್ನ ತಾಯಿಗೆ ಈ ಮೊದಲೇ ವಚನ ಕೊಟ್ಟಿರುವೆನಾದ್ದರಿಂದ ಬಳಿ ನನ್ನಲಿಕ್ಕೆ ಬರುವದಿಲ್ಲ.

ಆಗಲಿ ಮದುವೆಮಾಡಲಿ, ಇದರಿಂದ ನನಗೆ ಬಾಧಕವೇನು ಎಂದು ಆಲೋಚಿಸಿದನು.

ಯಾವನು ಸಾಕ್ಷಾತ್ ಪರಬ್ರಹ್ಮನೋ ಆತನಿಗೆ ಯಾವ ಅಂಜಿಕೆಯು; ಸಾಧಕನಿಗೆ ಮಾಯೆಯು ಬಾಧಿಸುತ್ತದಲ್ಲದೆ ಸಿದ್ಧನಿಗೆ ಹ್ಯಾಗೆ ಬಾಧಿಸುವದು? ಗಣಪತಿಯು ಮಾಯೆಗೆ ಸಿಲುಕದವನಾದ್ದರಿಂದ ಆವನು ಮದುವೆಗೆ ಅಂಜುವನೇ! ಮಾನುಷವೇಷ ತಳೆದದ್ದರಿಂದ ಆವನು ನಿಮಿತ್ತಮಾತ್ರಕ್ಕಾಗಿ ಮನುಷ್ಯರಂತೆ ನಟಿಸುತ್ತಿದ್ದನು.

ಗಣಪತಿಯು ಹಾದಿಗೆ ಬಂದನೆಂದು ಲಿಂಗೋಪಂತರಿಗೂ ಗೀತಾಬಾಯಿಗೂ ಪರಮ ಸಂತೋಷವಾಯಿತು. ಅಷ್ಟರಲ್ಲಿ ಸಂಭಾಜಿರಾಯರು ಅಳಿಯನನ್ನೂ ಬೀಗರನ್ನೂ ಕರೆಯಲಿಕ್ಕೆ ಬಂಡಿಗಳನ್ನು ಕಳುಹಿದರು. ಬೀಗರ ಕಡೆಯ ಪುರೋಹಿತನು ಬಂದು ಲಿಂಗೋಪಂತರಿಗೆ ಎಲ್ಲ ಸಂಗತಿಗಳನ್ನು ಹೇಳಿದನು. ಕೂಡಲೆ ತಡವೇನು? ಲಿಂಗೋಪಂತರು ಎಲ್ಲ ಸಾಮಗ್ರಿಗಳನ್ನು ಸಿದ್ಧಗೊಳಿಸಿದ್ದರು. ಅವರು ಮುಪ್ಪಿನ ಮುದುಕರಾಗಿದ್ದರೂ ಮೊಮ್ಮಗನ ಈ ವಿವಾಹಕಾರ್ಯದಲ್ಲಿ ತರುಣರಂತೆ ಚಟುವಟಿಕೆಯನ್ನು ವ್ಯಕ್ತಗೊಳಿಸುತ್ತಿದ್ದರು. ತಂದೆಯ ಅಪ್ಪಣೆಯಂತೆ ರಾವಜೀಪಂತರು ತಮ್ಮ ಕಡೆಯ ಅಸಂಖ್ಯ ಬಂಡಿಗಳನ್ನು ಹೊರಡಿಸಿದರು. ದಿಬ್ಬಣಕ್ಕಾಗಿ ಬಹು ಜನರು ಹೊರಟರು. ದೂರದ ಪ್ರವಾಸವಾಗದ್ದರಿಂದ ಬರುತ್ತೇನೆಂದವರಿಗೆ ಯಾರೂ ಬೇಡವೆಂದು ಅನ್ನಲಿಲ್ಲ. ಲಿಂಗೋಪಂತರಲ್ಲಿ ಅನ್ನದಾನಕ್ಕೆ ಮುಕ್ತದ್ವಾರವಿದ್ದದರಿಂದ ಜನರೂ ಹೋಗಲಿಕ್ಕೆ ಹಿಂದು-ಮುಂದೆ ನೋಡಲಿಲ್ಲ. ಯಜಮಾನನು ಕವಡಿ ಜುಂಬಕನಿದ್ದರೆ ಜನರು ಮುಂದರಿಯುವದಿಲ್ಲ. ಸಡಿಲಕೈ ಯಜಮಾನನು ಸಿಕ್ಕರೆ ಬೆಲ್ಲಕ್ಕೆ ಇರುವೆ ಗಂಟು ಬಿದ್ದ ಹಾಗೆ ಬೇಕಾದಷ್ಟು ಜನರು ಅವನ ಬಳಿಯಲ್ಲಿ ಸುಳಿದಾಡುವರು. ಈ ಲೋಕ ವ್ಯವಹಾರದಂತೆ ಲಿಂಗೋಪಂತರ ದಿಬ್ಬಣಕ್ಕೆ ಬಹು ಜನರು ಸೇರಿದರು. ಸಂಗಡ ಎಷ್ಟು

ಜನರಿದ್ದರೂ ಪಂತರು ಒಬ್ಬರಿಗೂ ಅನಾದರ ಮಾಡಲಿಲ್ಲ. ಎಲ್ಲರನ್ನೂ ಉಣಿಸಿ-ತಿನಿಸಿ ತೃಪ್ತರನ್ನಾಗ ಮಾಡಿದರು. ಮಹಾ ಸಾಧುವರ್ಯರಾದ ಲಿಂಗೋಪಂತರು ಸ್ವಾಭಾವಿಕವಾಗಿಯೇ ಭೂತದಯಾಪರರಾದ್ದರಿಂದ ಅವರು ಸಂಗಡ ಬಂದವರನ್ನು ಅಲಕ್ಷಿಸಬಹುದೇ? ಆದರೆ ಇಂಥ ಅಲಕ್ಷ್ಯವನ್ನು ಸ್ವಾರ್ಥಪರಾಯಣರು ಮಾತ್ರ ಮಾಡುವರು. ಸ್ವಾರ್ಥಿಗಳಾದ ಶ್ರೀಮಂತರು ಸಂಗಡಿಗರನ್ನು ಲಕ್ಷಿಸದೆ, ತಮ್ಮ ಹೊಟ್ಟೆಗೊಂದನ್ನೇ ತುಂಬಿಕೊಳ್ಳುವರು. ತಮ್ಮ ಮನೆಯಲ್ಲಿ ತಮ್ಮ ಸಲುವಾಗಿ ದುಡಿಯುವ ಬಡ ಜನರ ಹೊಟ್ಟೆಯ ಕಡೆಗೆ ಸ್ವಲ್ಪವೂ ಅವರ ಲಕ್ಷ್ಯವಿರುವದಿಲ್ಲ. ಹೀಗೆ ಮಾಡುವದು ತಮ್ಮ ದೊಡ್ಡಿಸ್ತನವೆಂದು ಅವರು ತಿಳಿಯುವರಲ್ಲದೆ ಅಧರ್ಮವೆಂದು ತಿಳಿಯುವದಿಲ್ಲ. ಇದಕ್ಕೇ ಅಜ್ಞಾನವೆನ್ನಬೇಕು? ಇದಕ್ಕೇ ಐಶ್ವರ್ಯದ ಮಬ್ಬು ಎನ್ನಬೇಕು. ಅಂತೆಯೇ ಕನ್ನಡಿಗರು "ಬಡವರ ಊಟ ಚಂದ, ಧನಿಕರ ಮಾತು ಚಂದ" ಎಂಬ ಗಾದೆಯನ್ನು ಹೇಳುವರು. ನಮ್ಮ ಲಿಂಗೋಪಂತರು ಶ್ರೀಮಂತರಾಗಿದ್ದರೂ ಈ ಮಾತಿಗೆ ಅಪವಾದವಾಗಿದ್ದರೆಂಬದನ್ನು ಹೇಳುವ ಕಾರಣವಿಲ್ಲ.

ಲಿಂಗೋಪಂತರಂತೆ ಸಂಭಾಜಿರಾಯನೂ ದಾನಶೂರನಿದ್ದನು. ಆತನು ಬಂದ ಬೀಗರನ್ನು ಯಥೋಚಿತವಾಗಿ ಮನ್ನಿಸಿ ಸೀಮಾಂತಪೂಜೆಯಿಂದ ಅಳಿಯನನ್ನು ತೃಪ್ತಿಗೊಳಿಸಿ, ಮೆರವಣಿಗೆಯಿಂದ ಎಲ್ಲರನ್ನು ಕರೆದುಕೊಂಡು ಹೋದನು. ಉಭಯ ಯಜಮಾನರು ಕಾರ್ಯದಕ್ಷರೂ ಪರಸ್ಪರ ಪ್ರೇಮಾದರವುಳ್ಳವರೂ ಇದ್ದದರಿಂದ ಮದುವೆಯ ಸಮಾರಂಭದಲ್ಲಿ ಸಾರದರ ಪ್ರವೇಶಕ್ಕೆ ಸ್ವಲ್ಪವೂ ಅವಕಾಶ ದೊರೆಯಲಿಲ್ಲ. ಪದ್ಧತಿಯಂತೆ ವಾಗ್ದಾನ-ಮಧುಪರ್ಕಗಳಾಗಿ ಅಕ್ಷತಾರೋಪಣವಾಯಿತು. ಗಣಪತಿಯು ವಧುವಿನ ಪಾಣಿಗ್ರಹಣ ಮಾಡಿ ಗೃಹಸ್ಥಾಶ್ರಮಿಯಾದನು. ಮಗನ ಎರಡು ಕೈಗಳಿಗೆ ನಾಲ್ಕು ಕೈಗಳಾದದ್ದನ್ನು ನೋಡಿ, ಗೀತಾಬಾಯಿಯು ಧನ್ಯತೆಯನ್ನು ಪ್ರಕಟಿಸಿದಳು. ಲಿಂಗೋಪಂತರು ತಮ್ಮ ನೇತ್ರ

ಗಳು ಸಫಲವಾದವೆಂದು ನುಡಿದರು. ಮದುವೆಯ ಕಾಲಕ್ಕೆ ಗಣಪತಿಯ ವಯಸ್ಸು ಹತ್ತು ವರುಷವಿದ್ದು ಕನ್ಯೆಯ ವಯಸ್ಸು ಒಂಬತ್ತು ವರುಷವಿತ್ತು; ಈ ಹಸುಮಕ್ಕಳ ಮದುವೆಯನ್ನು ನೋಡಿ ನಿಬ್ಬಣದ ಜನರೆಲ್ಲರೂ ಕೌತುಕಪಟ್ಟರು. ಲಿಂಗೋಪಂತರು ಅನ್ನದಾನದಿಂದ ಸಮಸ್ತಜಾತಿಯ ಜನರನ್ನೂ ತೃಪ್ತಿಪಡಿಸಿ ಮಂಗಳವಾದ್ಯಗಳು ಮೊಳಗುತ್ತಿರಲು ಮದುಮಗನೊಡನೆ ಊರಿಗೆ ಬಂದರು. ಹಾಗು ಶ್ರೀಪಾಂಡುರಂಗನ ಸಮಾರಾಧನೆಯನ್ನು ಮಾಡಿ ಗೋಂದಾವಲಿಯ ನಿವಾಸಿಗಳೆಲ್ಲರನ್ನೂ ತೃಪ್ತಿಗೊಳಿಸಿದರು. ಹೀಗೆ ಮದುವೆಯ ಸಮಾರಂಭವನ್ನು ಮುಗಿಸಿ ಲಿಂಗೋಪಂತರು, ಮೊಮ್ಮಗನು ಮನೆಯಲ್ಲಿ ಸಮಾಧಾನದಿಂದಿರುವದನ್ನು ನೋಡಿ ಸಂತೋಷಪಡಲಾರಂಭಿಸಿದರು.

---

## ೫ನೆಯ ಅಧ್ಯಾಯ:—ಸದ್ಗುರು ಶೋಧ.

ಮೊಮ್ಮಗನ ಮದುವೆಮಾಡಿದ ಬಳಿಕ ಲಿಂಗೋಪಂತರು ಬಹಳ ದಿವಸ ಬಾಳಲಿಲ್ಲ. ಮುಂದೆ ಒಂದು ವರುಷದಲ್ಲಿಯೇ ಪಾಂಡುರಂಗನ ಚರಣಗಳಲ್ಲಿ ಐಕ್ಯರಾದರು. ಅಜ್ಜಂದಿರು ಇಹಲೋಕಯಾತ್ರೆಯನ್ನು ಮುಗಿಸಲು ಗಣಪತಿಯು ಹೆರೆಯುಚ್ಚಿದ ಹಾವಿನಂತೆ ಚಪಲನಾದನು. ಅಜ್ಜನಿಗೆ ವಚನಕೊಟ್ಟಿದ್ದರಿಂದ ಆತನು ಇರುವವರೆಗೆ ಮನೆಬಿಟ್ಟು ಎಲ್ಲಿಯೂ ಹೊರಗೆ ಹೋಗಬಾರದೆಂದು ಮನೆಯನ್ನು ಹಿಡಿದಿದ್ದನು. ಆದ್ದರಿಂದ ಈಗ ಪುನಃ ಸದ್ಗುರು ಶೋಧದ ಹಂಬಲವು ಅವನನ್ನು ಅಂಟಿಕೊಂಡಿತು. ಸದ್ಗುರುವನ್ನು ಹುಡುಕದಿದ್ದರೆ ಹುಟ್ಟಿದ್ದು ವ್ಯರ್ಥವು ಎಂದು ತಿಳಿದು ಗಣಪತಿಯು ಚಂಚಲನಾದನು. ರಾತ್ರಿಹಗಲುಗಳಲ್ಲಿ ಅತನಿಗೆ ಸದ್ಗುರುವಿನ ಧ್ಯಾಸವೇ ಹತ್ತಿತು. ಕೂತರೆ ಸದ್ಗುರುವಿನ ಚಿಂತೆ; ನಿಂತರೆ ಸದ್ಗುರುವಿನ ಚಿಂತೆ; ಮಲಗಿದರೆ ಸದ್ಗುರುವಿನ ಚಿಂತೆ ಬಹಳ ಹೇಳುವದೇನು?

ಸಮಸ್ತ ವ್ಯವಹಾರಗಳಲ್ಲಿಯೂ ಸದ್ಗುರುವಿನ ಚಿಂತೆಯೇ ಆತನಿಗೆ ಮುಖ್ಯ ವಾಗಿತ್ತು. ರಾವಜೀಪಂತರು ವಿರಕ್ತರಾದ್ದರಿಂದ ಮನೆತನದ ಭಾರವೆಲ್ಲ ಗೀತಾಬಾಯಿಯವರ ಮೇಲೆಯೇ ಬಿದ್ದಿತು. ಆದ್ದರಿಂದ ಆ ಸಾಧ್ವಿಯು ಗಣಪತಿಯನ್ನು ವ್ಯವಹಾರಕ್ಕೆ ಹಚ್ಚಬೇಕೆಂದು ಮಾಡಿದಳು. ಆದರೆ ಗಣಪತಿಯು ತಂದೆಗಿಂತಲೂ ವಿರಕ್ತನಾದ್ದರಿಂದ ಆ ಸಾಧ್ವಿಯ ಆಟವು ನಡೆಯದಾಯಿತು. ಅವಳು ಗಣಪತಿಗೆ ಪರಿಪರಿಯಿಂದ ಬೋಧಿಸತೊಡ ಗಿದಳು. ಆಕೆಯ ಉಪದ್ರವಕ್ಕಾಗಿ ಗಣಪತಿಯು ಮನೆತನದ ಯಾವ ದೊಂದು ಕೆಲಸವನ್ನು ಮಾಡುತ್ತಿದ್ದನು. ಆದರೆ ಆ ಕೆಲಸಮಾಡುವಾಗ ಅವನ ಮನಸ್ಸು ಸದ್ಗುರು ಚಿಂತನದಲ್ಲಿಯೇ ತೊಡಗಿರುತ್ತಿದ್ದದರಿಂದ ಮಾಡಿದ ಆ ಕೆಲಸವು ನಿರುಪಯೋಗವಾಗುತ್ತಿತ್ತು. ಅವನು ಕೆಲಸ ಕೆಡಿಸುವನೆಂದು ತಿಳಿದು ಆ ಸಾಧ್ವಿಯು ಮುಂದೆ ಅವನಿಗೆ ಕೆಲಸ ಹೇಳು ವದನ್ನೇ ಬಿಟ್ಟಳು.

ಗಣಪತಿಗೆ ಮನೆಯಲ್ಲಿರುವದಕ್ಕೆ ಇಷ್ಟವಿಲ್ಲದಾಯಿತು. ಆತನ ಮನಸ್ಸು ಸದ್ಗುರುವನ್ನು ಹುಡುಕುವದಕ್ಕೆ ತವಕಿಸಹತ್ತಿತು. ಆತನು ಅನುತಾಪದಿಂದ ಜರ್ಜರಿತನಾದನು. ಆಗ ಅವನು ಒಂದು ದಿನ ಮನೆ ಯಲ್ಲಿ ಯಾರಿಗೂ ತಿಳಿಯದಂತೆ ಮನೆಯಿಂದ ಹೊರಬಿದ್ದನು. ಆಗ ಅವನ ವಯಸ್ಸು ೧೨ ವರ್ಷಕ್ಕೆ ಮಿಾರಿರಲಿಲ್ಲ. ಹೀಗೆ ಮನೆಯಿಂದ ಹೊರ ಬಿದ್ದ ಗಣಪತಿಯು ನೆಟ್ಟಗೆ ಕಾಶಿಗೆ ಹೋದನು. ಆ ದೊಡ್ಡ ಕ್ಷೇತ್ರದಲ್ಲಿ ತನ್ನ ಸದ್ಗುರುವು ಸಿಗುವನೋ ಎಂದು ಶೋಧವಮಾಡಿದನು; ಆದರೆ ಅಲ್ಲಿ ಆತನಿಗೆ ಸದ್ಗುರುವು ಸಿಗಲಿಲ್ಲ. ಸದ್ಗುರುವನ್ನು ಹುಡುಕುವದೆಂದ ರೇನು? ಆತನು ಹ್ಯಾಗೆ ಸಿಗಬೇಕು? ಇಂಥವನೇ ತನ್ನ ಸದ್ಗುರುವೆಂದು ಹ್ಯಾಗೆ ತಿಳಿಯಬೇಕು? ಎಂಬ ಸಂಗತಿಗಳು ವಾಚಕರನ್ನು ಹಲವು ವಿಧ ಸಂಶಯದಲ್ಲಿ ಕೆಡವಬಹುದು. ಈ ವಿಷಯವು ಬಹು ಬಿಕ್ಕಟ್ಟಿನದಾದ್ದ ರಿಂದ ಅನುಭವದ ಹೊರತು ಇದು ತಿಳಿಯಲಾರದು. ಸದ್ಗುರುವಿಗೂ

ಸಚ್ಛಿಷ್ಯನಿಗೂ ಜನ್ಮಜನ್ಮಾಂತರದ ಸಂಬಂಧವಿದ್ದದರಿಂದ ಸಚ್ಛಿಷ್ಯನಿಗೇ ಸದ್ಗುರುವಿನ ಗುರುತು ಸಿಗುವದಲ್ಲದೆ ಅನ್ಯರಿಗೆ ಸಿಗಲಾರದು. ಮಕ್ಕಳಿಗೆ ತಾಯಿಯನ್ನು ನೋಡಿದರೆ ಹ್ಯಾಗೆ ಸ್ವಾಭಾವಿಕವಾಗಿ ಆನಂದವಾಗುವದೋ ಹಾಗೆ ಸಚ್ಛಿಷ್ಯರಿಗೆ ಸದ್ಗುರುವನ್ನು ನೋಡಿದರೆ ಆನಂದವಾಗುವದು. ಯಾವಾತನ ದರ್ಶನಮಾತ್ರದಿಂದ ಶಿಷ್ಯನ ಇಚ್ಛೆಗಳು ಪೂರ್ಣವಾಗುವವೋ ಅಂದರೆ ಶಿಷ್ಯನಲ್ಲಿ ಇನ್ನೊಬ್ಬ ಸಾಧುವಿನ ಕಡೆಗೆ ಹೋಗಬೇಕೆಂಬ ಇಚ್ಛೆಯು ಉಳಿಯುವದಿಲ್ಲವೋ, ಯಾವಾತನ ದರ್ಶನದಿಂದ ಮನಸ್ಸಿಗೆ ಪೂರ್ಣ ಸಮಾಧಾನವು ಸಿಗುವದೋ ಆತನೇ ಸದ್ಗುರುವೆಂದು ಸಚ್ಛಿಷ್ಯನು ತಿಳಿಯುವನು. ಪೂರ್ವ ಋಣಾನುಬಂಧದಿಂದಲೇ ಸದ್ಗುರು ಸಚ್ಛಿಷ್ಯರಲ್ಲಿ ಇಂಥ ಸಹಜ ಪ್ರೇಮವು ಉದ್ಭವಿಸುವದು. ಇಂಥ ಸಹಜ ಪ್ರೇಮವು ಯಾವಾತನ ದರ್ಶನಮಾತ್ರದಿಂದ ಹುಟ್ಟುವದೋ ಎಂದು ಗಣಪತಿಯು ಪ್ರಸಿದ್ಧ ಕ್ಷೇತ್ರಗಳನ್ನೆಲ್ಲ ತಿರುಗಹತ್ತಿದನು. ಕಾಶಿಯಾಯಿತು, ಗಯಾಕ್ಷೇತ್ರವಾಯಿತು, ಅಯೋಧ್ಯೆಯಾಯಿತು, ಉತ್ತರಸೀಮೆಯಲ್ಲಿದ್ದ ಎಲ್ಲ ಕ್ಷೇತ್ರಗಳೂ ಆದವು; ಅಸಂಖ್ಯಜನ ಸತ್ಪುರುಷರ ದರ್ಶನವಾಯಿತು. ಆದರೆ ಅವರಲ್ಲ ಒಬ್ಬರಿಂದಲೂ ಆತನಿಗೆ ಸಮಾಧಾನವು ಸಿಗದಾಯಿತು. ಯಾರನ್ನು ನೋಡಿದರೂ ಸಹಜ ಪ್ರೇಮವು ಹುಟ್ಟದಾಯಿತು. ಬಳಿಕ ಆತನು ಮನಸ್ಸಿನಲ್ಲಿಯೇ ತಳಮಳಗೊಳ್ಳುತ್ತ ಅರವಲೀ ಪರ್ವತಕ್ಕೆ ಬಂದನು. ಆ ವಿಶಾಲ ಪರ್ವತದಲ್ಲಿ ಅಸಂಖ್ಯ ಗುಹೆಗಳಿದ್ದವು. ಕೆಲವು ಗುಹೆಗಳಲ್ಲಿ ಸಾಧುಸತ್ಪುರುಷರು ತಪಶ್ಚರ್ಯ ಮಾಡುತ್ತಿದ್ದರು. ಗಣಪತಿಯು ಒಂದು ಗುಹೆಗೆ ಹೋದನು. ಅಲ್ಲಿಯೊಬ್ಬ ಸತ್ಪುರುಷನು ತಪಶ್ಚರ್ಯ ಮಾಡುತ್ತಿದ್ದನು. ಗಣಪತಿಯು ಆತನಿಗೆ ಸಾಷ್ಟಾಂಗನಮಸ್ಕಾರ ಹಾಕಿ ಅವನ ಬಳಿಯಲ್ಲಿ ಕುಳಿತುಕೊಂಡನು. ಸದ್ಗುರು ಚಿಂತೆಯಿಂದ ಗಣಪತಿಯ ಮುಖವು ಬಾಡಿಹೋಗಿತ್ತು. ಆ ಸತ್ಪುರುಷನಿಗೆ ಗಣಪತಿಯನ್ನು ನೋಡಿ ದಯೆಹುಟ್ಟಿತು. ಆತನು ಜ್ಞಾನದೃಷ್ಟಿಯಿಂದ

ನೋಡಿದನು. ಗಣಪತಿಯು ಯಾರೆಂಬುದು ಆತನಿಗೆ ಗೊತ್ತಾಯಿತು. ಆಗ ಅವನು ಗಣಪತಿಯನ್ನು ಕುರಿತು—"ತಮ್ಮ, ನಾನು ನಿನ್ನ ಸದ್ಗುರುವಲ್ಲ. ನಿನ್ನ ಸದ್ಗುರುವು ಬೇರೆಯಿರುವನು. ಈಗ ನೀನು ಊರಿಗೆ ಹೋಗು; ಸ್ವಲ್ಪ ದಿನಗಳಲ್ಲಿ ನಿನಗೆ ನಿನ್ನ ಸದ್ಗುರುವಿನ ಸಮಾಗಮವಾಗುವದು. ಆಗ ಮಾತ್ರ ನೀನು ಪೂರ್ಣ ಸಮಾಧಾನವನ್ನು ಹೊಂದುವಿ." ಎಂದು ನುಡಿದು ಪುನಃ ತಪಸ್ಸಿನಲ್ಲಿ ಮಗ್ನನಾದನು. ಗಣಪತಿಗೆ ಯೋಚನೆಯಾಯಿತು. ನನ್ನ ಸದ್ಗುರುವು ಎಲ್ಲಿರುವನು? ಪ್ರಭುವೇ ಬೇಗನೆ ದರ್ಶನಕೊಡು ಎಂದು ಪ್ರಾರ್ಥಿಸಿದನು, ಬಳಿಕ ಆತನು ಆ ಸ್ಥಳದಲ್ಲಿ ನಿಲ್ಲದೆ ಪುನಃ ಉತ್ತರಕ್ಕೆ ಹೊರಟು ಕಾಶಿ, ಗಯಾ, ಅಯೋಧ್ಯಾ ಮೊದಲಾದ ಕ್ಷೇತ್ರಗಳನ್ನು ನೋಡಿಕೊಂಡು ಊರಿಗೆ ಹೊರಟನು. ಹೋಗುವಾಗ ಅಯೋಧ್ಯೆಯಲ್ಲಿ ಶ್ರೀರಾಮಲಕ್ಷ್ಮಣರ ಸುಲಕ್ಷಣ ಮೂರ್ತಿಗಳನ್ನು ಸಂಗಡ ತೆಕ್ಕೊಂಡು ಅವನ್ನು ಕಾವಡಿಯಲ್ಲಿರಿಸಿ ಹೊತ್ತುಕೊಂಡು ಹೊರಟನು. ಪಯಣದಮೇಲೆ ಪಯಣಮಾಡುತ್ತ ಗೋಂದಾವಲಿಯ ಸಮೀಪದಲ್ಲಿರುವ ತಡವಳ ಎಂಬ ಗ್ರಾಮಕ್ಕೆ ಬಂದನು. ಅಲ್ಲಿ ಆ ಮೂರ್ತಿಗಳನ್ನಿರಿಸಿ ಮುಂದೆ ಹೋಗಬೇಕೆಂದು ಇಚ್ಛಿಸಿ ಆ ಊರ ಕುಲಕರಣಿಯ ಮನೆಗೆ ಹೋಗಿ ಮೂರ್ತಿಗಳನ್ನಿಟ್ಟುಕೊಳ್ಳೆಂದು ಹೇಳಿದನು. ಆ ಮೂರ್ತಿಗಳ ದಿವ್ಯತೇಜಸ್ಸನ್ನು ನೋಡಿ ಕುಲಕರ್ಣಿಯು ಒಪ್ಪಿಕೊಂಡನು. ಬಳಿಕ ಆತನು ಗೋಂದಾವಲಿಗೆ ಹೋಗಿ ತಾಯಿಗೆ ದರ್ಶನವನ್ನಿತ್ತು ಆಕೆಯನ್ನು ಮಧುರೋಕ್ತಿಗಳಿಂದ ಸಮಾಧಾನಪಡಿಸಿ ತೀರ್ಥಾಟನಕ್ಕಾಗಿ ಹೊರಟನು. ಸದ್ಗುರುವು ಎಲ್ಲಿ ಸಿಗುವನೋ ಎಂಬ ಚಿಂತೆಯೊಂದೇ ಆತನಿಗಿತ್ತಲ್ಲದೆ ಬೇರೆಚಿಂತೆಯಿರಲಿಲ್ಲ. ಹುಮನಾಬಾದದಲ್ಲಿ ಪ್ರಸಿದ್ಧ ಸತ್ಪುರುಷರೆನಿಸಿದ ಮಾಣಿಕಪ್ರಭುಗಳ ಬಳಿಗೆ ಹೋದನು. ಅಲ್ಲಿಯೂ ಆತನಿಗೆ ಸಮಾಧಾನವು ಸಿಕ್ಕಲಿಲ್ಲ. ಬಳಿಕ ಅಕ್ಕಲಕೋಟಿ ಸಾಧುಗಳ ಕಡೆಗೆ ಹೋದನು. ದತ್ತಾವತಾರಿಕರೆಂದು ಅಕ್ಕಲಕೋಟಿ ಸಾಧುಗಳು ಪ್ರಸಿ

ದ್ಧಿಯನ್ನು ಪಡೆದಿದ್ದರು. ಗಣಪತಿಯು ಅವರ ಬಳಿಗೆ ಹೋಗಿ ಸದ್ಭಾವದಿಂದ ನಮಸ್ಕರಿಸಿ—ಈ ದೀನನನ್ನು ಉದ್ಧರಿಸಬೇಕು ಎಂದು ಬೇಡಿಕೊಂಡನು. ಆಗ ಅಕ್ಕಲಕೋಟೆಯ ಮಹಾರಾಜರು ಆತನನ್ನು ಕಣ್ಣುತುಂಬ ನೋಡಿ—ವತ್ಸಾ, ಇಲ್ಲಿಗೇಕೆ ಬಂದೆ? ತಾಯಿಯನ್ನು ಕಳೆದುಕೊಂಡ ಕರುವು ಕಂಡಕಂಡಲ್ಲಿ ಅಲೆಯುವಂತೆ ನೀನು ಹೀಗೇಕೆ ತಿರುಗುವೆ? ನಿನ್ನ ಸದ್ಗುರುವು ನಿನಗೆ ಸಿಗದಿರುವುದರಿಂದಲೇ ಈ ರೀತಿ ಕಷ್ಟಪಡಬೇಕಾಗಿದೆಯಲ್ಲವೇ? ತಮ್ಮಾ, ಚಿಂತಿಸಬೇಡ ನಿನ್ನ ಗುರುವು ದೂರದಲ್ಲಿ ಕುಳಿತು ನಿನ್ನನ್ನು ನಿರೀಕ್ಷಿಸುತ್ತಿರುವನು. ನಿನಗೆ ಸದ್ಗುರುವು ಸಿಗುವ ಯೋಗವು ಸಮೀಪಿಸಿದೆ. ನಾನು ನಿನ್ನ ಸದ್ಗುರುವಲ್ಲ, ನನ್ನಿಂದ ನೀನು ಅನುಗ್ರಹೀತನಾಗಲಾರೆ; ನಿನ್ನ ಗುರುವು ಗೋದಾವರೀತೀರದಲ್ಲಿ ಎಳೆಗಾಂವ ಎಂಬಲ್ಲಿ ವಾಸಿಸಿರುವನು. ನೀನು ತಡಮಾಡದೆ ಅಲ್ಲಿಗೆ ಹೋಗಿ ನಿನ್ನ ಗುರುವನ್ನು ನೀನು ಹೊಂದು ಎಂದು ಹೇಳಿದರು. ಆಗ ಗಣಪತಿಗೆ ತುಂಬಾ ಆನಂದವಾಯಿತು. ಸದ್ಗುರುವನ್ನು ತೋರಿಸಿಕೊಟ್ಟಿದ್ದಕ್ಕೆ ಮಹಾರಾಜರ ಅಭಿನಂದನಮಾಡಿ ಕೂಡಲೆ ಅಲ್ಲಿಂದ ಹೊರಟನು. ತಾಯಿಯನ್ನು ಕಾಣದೆ ಹಂಬಲಿಸುವ ಮಗುವನ್ನು ಯಾರಾದರೂ ಎತ್ತಿಕೊಂಡು ತಾಯಿಯ ಬಳಿಗೆ ಮುಟ್ಟಿಸಿದರೆ ಆ ಮಗುವು ಎಷ್ಟು ಆನಂದಪಡಬೇಡ! ಮತ್ತು ತನ್ನನ್ನು ತಾಯಿಯಬಳಿಗೆ ಕರೆತಂದವರನ್ನು ಮನಸ್ಸಿನಲ್ಲಿ ಎಷ್ಟು ಬಗೆಯಿಂದ ಕೊಂಡಾಡಬಹುದು? ಅದರಂತೆ ಗಣಪತಿಯು ಸದ್ಗುರುವನ್ನು ತೋರಿಸಿಕೊಟ್ಟಿದ್ದಕ್ಕಾಗಿ ಮನದಲ್ಲಿಯೇ ಅಕ್ಕಲಕೋಟೇ ಸಾಧುಗಳನ್ನು ಕೊಂಡಾಡುತ್ತ ಎಳೆಗಾಂವದ ಮಾರ್ಗವನ್ನು ಕ್ರಮಿಸಲಾರಂಭಿಸಿದನು.

ಎಳೆಗಾಂವದಲ್ಲಿ ತುಕಾರಾಮಸಾಧು(ಸಮರ್ಥ ರಾಮದಾಸರ ಕಾಲದಲ್ಲಿದ್ದ ತುಕಾರಾಮ ಸಾಧುಗಳು ಇವರಲ್ಲ)ಗಳು ತಮ್ಮ ಶಿಷ್ಯರನ್ನು ಕುರಿತು—ಎಲೈ ಶಿಷ್ಯರೇ, ಜಾಗ್ರತರಾಗಿರಿ. ಕಳ್ಳನು ದಾರೀ ನಡೆದು ಬರು

ತ್ತಿರುವನು. ಅವನು ಬಂದನೆಂದರೆ ನಮ್ಮ ಸರ್ವಸ್ವವನ್ನು ಅಪಹರಿಸುವನು. ಅಷ್ಟರಲ್ಲಿಯೇ ಏನು ಸಾಧಿಸುವದನ್ನು ಸಾಧಿಸಿಕೊಳ್ಳಿರಿ. ಎಂದು ಹೇಳಿದರು. ಮುಂದೆ ನಾಲ್ಕೇ ದಿನಗಳಲ್ಲಿ ಗಣಪತಿಯು ಸದ್ಗುರು ಸನ್ನಿಧಿಯನ್ನು ಸೇರಿದನು. ಅಹಾ! ಆ ಆನಂದವನ್ನು ಬಣ್ಣಿಸುವದೇನು! ಕಷ್ಟಪಟ್ಟು ಸದ್ಗುರುಚರಣಗಳನ್ನು ಕಂಡವರೇ ಆ ಆನಂದವನ್ನು ಬಲ್ಲರಲ್ಲದೆ ಅನ್ಯರಿಗೆ ಈ ಆನಂದದ ಕಲ್ಪನೆಯು ಬರಲಾರದು. ತುಕಾರಾಮ ಸಾಧುಗಳು ಸದ್ಭಾವದಿಂದ ಕಾಲ್ಗೆರಗಿದ ಗಣಪತಿಯನ್ನು ಹಿಡಿದೆಬ್ಬಿಸಿ— ತಮ್ಮಾ ಅಂಜಬೇಡ; ಧನ್ಯನಾದೆ ಎಂದು ನುಡಿದರು. ಗಣಪತಿಯು ಎದ್ದು ನಿಂತು ಗುರುಮೂರ್ತಿಯನ್ನು ಆಪಾದಮಸ್ತಕವಾಗಿ ನೋಡಿದನು. ದರ್ಶನಮಾತ್ರದಿಂದಲೇ ಸಂಪೂರ್ಣ ತೃಪ್ತಿಯು ಆತನಲ್ಲುಂಟಾಯಿತು. ಮನಸ್ಸಿನ ಚಾಂಚಲ್ಯವು ಸಂಪೂರ್ಣವಾಗಿ ಅಳಿದು ಹೋಯಿತು. ತಾಯಿಯ ಕಂಕುಳದಲ್ಲಿ ಕುಳಿತ ಎಳೆ ಮಗುವು ನಿರ್ಭಯದಿಂದ ಆನಂದಪಡುವಂತೆ ಸದ್ಗುರುಚರಣದಲ್ಲಿ ಲೀನಚಿತ್ತದಿಂದ ಗಣಪತಿಯು ಭಯರಹಿತನಾಗಿ ಬ್ರಹ್ಮಾನಂದವನ್ನನುಭವಿಸಲಾರಂಭಿಸಿದನು. ಪ್ರಿಯವಾಚಕರೇ,, ನೋಡಿದಿರಾ, ಸದ್ಗುರು ದರ್ಶನದ ಮಹತ್ವವನ್ನು ! ಗಣಪತಿಯು ಇದುವರೆಗೆ ಅಸಂಖ್ಯ ಜನ ಸಾಧುಗಳ ದರ್ಶನವನ್ನು ಹೊಂದಿದ್ದರೂ ಆತನಿಗೆ ಇಂಥ ಆನಂದವು ಲಭಿಸಿದ್ದಿಲ್ಲ. ಜನ್ಮದಾತೃವಾದ ತಂದೆಯೇ ತಂದೆಯಾದಾನಲ್ಲದೆ ಮಿಕ್ಕವರು ತಂದೆಯಾಗಲಾರರು. ಇದು ಹ್ಯಾಗೆ ವ್ಯವಹಾರದಲ್ಲಿ ಸ್ವಾಭಾವಿಕವೋ ಹಾಗೆ ಪಾರಮಾರ್ಥದಲ್ಲೂ ಸದ್ಗುರವೇ ಸದ್ಗುರುವಾದಾನಲ್ಲದೆ ಅನ್ಯರು ಸದ್ಗುರುಗಳಾಗರು. ಎಷ್ಟೋ ಜನರು ಅನೇಕ ಸಾಧುಗಳ ದರ್ಶನ ಹೊಂದಿದರೂ ಮನಸ್ಸಿನ ಸಮಾಧಾನವನ್ನು ಹೊಂದದೆ ಚಡಪಡಿಸುತ್ತಿರುವದಕ್ಕೆ ಇದೇ ಕಾರಣವು. ನಿಜವಾದ ಸದ್ಗುರುವು ಸಿಕ್ಕ ಹೊರತು ಸಮಾಧಾನವು ದೊರೆಯಲಾರದು.

---

## ೬ನೆಯ ಅಧ್ಯಾಯ:—ಸದ್ಗುರು ಸೇವಾರೂಪವಾದ ತಪಶ್ಚರ್ಯೆ.

ಸದ್ಗುರುಗಳಲ್ಲಿ ನಾಲ್ಕು ಪ್ರಕಾರವಿರುವದು. ಒಂದನೆಯ ಪ್ರಕಾರದ ಸದ್ಗುರುಗಳು ಮಾರ್ಜಾರಕಿಶೋರನ್ಯಾಯದವರು. ಮಾರ್ಜಾರವು ಅಂದರೆ ಬೆಕ್ಕು ತನ್ನ ಮರಿಗಳ ಮೇಲೆ ಅತ್ಯಂತ ಪ್ರೇಮ ಮಾಡುವದು. ಮರಿಗಳನ್ನು ಬಾಯಲ್ಲಿ ಕಚ್ಚಿಕೊಂಡು ಇಲ್ಲವೆ ಸಂಗಡ ಕರೆದುಕೊಂಡು ತಿರುಗಾಡುವದು. ಅನ್ಯರಿಂದ ತನ್ನ ಮರಿಗೆ ಬಾಧೆ ತಟ್ಟಬಾರದೆಂದು ಜಾಗರೂಕವಾಗಿರುವದು. ಮತ್ತು ಮರಿಗಳು ತನ್ನನ್ನು ಬಿಟ್ಟು ದೂರ ಹೋಗತೊಡಗಿದರೆ ಅವನ್ನು ಹಿಡಿದು ತಂದು ಸುರಕ್ಷಿತ ಸ್ಥಳದಲ್ಲಿರಿಸಿ ಸಂರಕ್ಷಿಸುವದು. ಈ ಮಾರ್ಜಾರವು ತನ್ನ ಮರಿಗಳ ವಿಷಯವಾಗಿ ಹ್ಯಾಗೆ ದಕ್ಷತೆಯನ್ನು ವಹಿಸುವದೋ ಹಾಗೆ ಯಾವ ಸದ್ಗುರುಗಳು ತಮ್ಮ ಶಿಷ್ಯರ ಮೇಲೆ ಮಮತೆ ಮಾಡುವರೋ ಮತ್ತು ಅವರನ್ನು ಧ್ಧರಿಸುವದಕ್ಕಾಗಿ ಹಗಲಿರಳು ಸದುಪದೇಶ ಮಾಡುತ್ತಲಿರುವರೋ ಶಿಷ್ಯರಿಗೆ ಸ್ವಲ್ಪಾದರೂ ಕೂಡಾ ದುಃಖ ಕೊಡಲಾರರೋ ಅಂಥ ಸದ್ಗುರುಗಳೇ ಮಾರ್ಜಾರಕಿಶೋರನ್ಯಾಯದವರೆಂದು ಹೇಳಬಹುದು. ಲೋಕದಲ್ಲಿ ಇಂಥ ಸದ್ಗುರುಗಳು ಸಿಗುವದು ಪರಮ ದುರ್ಲಭವಿರುವದು. "ಅಗಡಿಯ ಶ್ರೀಶೇಷಾಚಲಸದ್ಗುರುಗಳು ಮಾತ್ರ ಈ ವರ್ಗದಲ್ಲಿರುವರೆಂದು" ಖುದ್ಧ ನಮ್ಮ ಚರಿತ್ರನಾಯಕರೇ ತಮ್ಮ ಭಕ್ತರ ಮುಂದೆ ಉದ್ಗಾರಗಳನ್ನು ತೆಗೆದಿದ್ದರಂತೆ! ಇರಲಿ; ಎರಡನೆಯ ವರ್ಗದ ಸದ್ಗುರುಗಳು ಮತ್ಸ್ಯಕಿಶೋರನ್ಯಾಯದವರು. ಮೀನವು ತನ್ನ ಮರಿಗಳಿಗೆ ಸ್ತನಪಾನವನ್ನು ಮಾಡಿಸುವದಿಲ್ಲ. ಅದು ಬೇರೆ ಯಾವಪದಾರ್ಥಗಳನ್ನೂ ಒದಗಿಸಿಕೊಟ್ಟು ಅವುಗಳನ್ನು ಸಂರಕ್ಷಿಸುವದಿಲ್ಲ. ಆದರೆ ಕೇವಲ ಮರಿಗಳನ್ನು ಕಣ್ಣು ತುಂಬ ನೋಡಿ ಅವುಗಳಲ್ಲಿ ಆನಂದವನ್ನುಂಟು ಮಾಡುತ್ತದೆ. ಇದರ ಹೊರತು ಮರಿಗಳ ಯೋಗಕ್ಷೇಮದ ವಿಷಯಕ್ಕೆ ಬೇರೆ

ಏನೂ ಯತ್ನ ಮಾಡುವದಿಲ್ಲ. ಇದರಂತೆ ಯಾವ ಸದ್ಗುರುಗಳು ವರ್ತಿ ಸುವರೋ ಅವರು ಮತ್ಸಕಿಶೋರನ್ಯಾಯದವರೆಂದು ಹೇಳಬಹುದು. ಮೂರನೆಯ ವರ್ಗದವರು ಕೂರ್ಮಕಿಶೋರನ್ಯಾಯದವರು. ಕೂರ್ಮವು ಒಂದು ಕಡೆಗೆ ಇರುವದು. ಮರಿಯು ಒಂದು ಕಡೆಗೆ ಇರುವದು. ಮರಿಗೆ ಕೂರ್ಮದ ಅಂದರೆ ತಾಯಿಯ ಸ್ಮರಣಮಾತ್ರದಿಂದಲೇ ಆನಂದ ವಾಗುವದು. ಸ್ಮರಣೆಯ ಹೊರತು ಬೇರೆ ರೀತಿಯಿಂದ ಆನಂದಪಡ ಲಿಕ್ಕೆ ಮರಿಗೆ ಅವಕಾಶವೇ ಇರುವದಿಲ್ಲ. ಈ ಪ್ರಕಾರ ಯಾವ ಸದ್ಗುರು ಗಳ ಸ್ಮರಣಮಾತ್ರದಿಂದ ಶಿಷ್ಯನು ಸಂತುಷ್ಟತೆಯನ್ನು ಪಡೆಯಬೇಕಾಗು ತ್ತದೆಯೋ ಅಂಥ ಸದ್ಗುರುಗಳು ಕೂರ್ಮಕಿಶೋರನ್ಯಾಯದವರೆಂದು ಹೇಳಬಹುದು. ನಾಲ್ಕನೆಯವರು ಮರ್ಕಟಕಿಶೋರನ್ಯಾಯದವರು. ಮರ್ಕಟವು ಗಿಡದಿಂದ ಗಿಡಕ್ಕೆ ಜಿಗಿದಾಡುವದು. ಒಗಲಲ್ಲಿದ್ದ ಮರಿಯು ನೆಲಕ್ಕೆ ಬಿದ್ದೀತೆಂಬ ಅರಿವು ಅದಕ್ಕಿರುವದಿಲ್ಲ. ಮರಿಗಳೇ ತಮ್ಮ ಸಂರ ಕ್ಷಣಾರ್ಥವಾಗಿ ತಾಯಿಯ ಹೊಟ್ಟೆಗೆ ತೆಕ್ಕಿಬಿದ್ದು, ಅದನ್ನು ಗಟ್ಟಿಯಾಗಿ ಅಪ್ಪಿಕೊಂಡಿರಬೇಕು. ಒಂದು ವೇಳೆ ಮರಿಯು ಕೈ ಬಿಟ್ಟರೆ ಅದು ಸತ್ತು ಹೋಗುವದೇ ನಿಶ್ಚಯ. ಮರಿಗಳು ತಮ್ಮ ಕಸುವಿನ ಬಲದಿಂದ ಲೇ ತಾಯಿಯನ್ನು ಗಟ್ಟಿಯಾಗಿ ಹಿಡಿದುಕೊಂಡಿರಬೇಕು. ಅಂದರೆ ಅವು ಗಳ ಪರಿಣಾಮವು ನೆಟ್ಟಗಾಗುವದು. ಹೀಗೆ ಯಾವ ಸದ್ಗುರುಗಳು ಶಿಷ್ಯ ರಿಗೆ ದುಃಖವಾದೀತೆಂಬ ಪರಿವೆಯಿಲ್ಲದೆ ಅಡವಿ-ಗುಡ್ಡ-ಗವ್ಹರ ಮೊದಲಾ ದವುಗಳನ್ನು ತಿರುಗುತ್ತಿರುವರೋ ಅಂಥ ಸದ್ಗುರುಗಳು ಮರ್ಕಟಕಿಶೋರ ನ್ಯಾಯದವರೆಂದು ಹೇಳಲಾಗುವದು. ಪ್ರಸ್ತುತದ ನಮ್ಮ ಚರಿತ್ರನಾಯ ಕರ ಸದ್ಗುರುಗಳಾದ ತುಕಾರಾಮ ಸಾಧುಗಳು ಮರ್ಕಟಕಿಶೋರ ನ್ಯಾಯದ ಸದ್ಗುರುಗಳೇ ಆಗಿದ್ದರು.

ಇಂಥ ಮರ್ಕಟ ಕಿಶೋರನ್ಯಾಯದಂತಿರುವ ಸದ್ಗುರುಗಳಲ್ಲಿ ಸೇವೆ ಮಾಡಿಕೊಂಡಿರಬೇಕಾದರೆ ಶಿಷ್ಯನು ಎಷ್ಟು ಗಟ್ಟಿಗನಾಗಿರಬೇ

ಕೆಂಬುದನ್ನು ಬರೆಯುವ ಕಾರಣವಿಲ್ಲ. ಗಣಪತಿಯು ಸಮರ್ಥನಾದ್ದರಿಂದಲೇ ಇಂಥ ಗುರುಗಳಲ್ಲಿ ಸೈ ಎಂದೆನಿಸಿಕೊಂಡನು. ಗಣಪತಿಯ ಯೋಗ್ಯತೆಯು ಉಳಿದ ಶಿಷ್ಯರಿಗೆ ಹ್ಯಾಗೆ ಒರಬೇಕು?

ಗಣಪತಿಯಲ್ಲಿ ಎಷ್ಟು ಗುರುಭಕ್ತಿಯಿರುವದೆಂಬದು ತುಕಾರಾಮ ಸಾಧುಗಳಿಗೆ ಚನ್ನಾಗಿ ಗೊತ್ತಿತ್ತು. ಶಿಷ್ಯನ ಯೋಗ್ಯತೆಯು ಸದ್ಗುರುವಿಗೆ ಗೊತ್ತಾಗದೆ ಇನ್ನಾರಿಗೆ ಗೊತ್ತಾಗಬೇಕು! ಆದರೂ ಲೋಕದಲ್ಲಿ ಆತನ ಗುರುಭಕ್ತಿಯನ್ನು ಪ್ರಸಿದ್ಧಪಡಿಸುವದಕ್ಕಾಗಿ ಹಲವು ಬಗೆಗಳಿಂದ ಆತನನ್ನು ಪರೀಕ್ಷಿಸಿದರು. ಆತನ ಈ ಪರೀಕ್ಷೆಯು ಅತ್ಯಂತ ಕಠೋರವಾಗಿರುವದು. ಸಾಮಾನ್ಯರಿಂದ ಆ ಸಂಗತಿಯನ್ನು ಕೇಳುವದಕ್ಕೆ ಸಹ ಅಶಕ್ಯವು. ನಮ್ಮ ವಾಚಕರಿಗೋಸ್ಕರ ಕೆಲವು ಮುಖ್ಯ ಸಂಗತಿಗಳನ್ನು ಇಲ್ಲಿ ಉದಹರಿಸುತ್ತೇವೆ.

ಗಣಪತಿಯು ಸೇವೆಗೆ ಬಂದು ನಿಂತ ಬಳಿಕ ಈತನೇ ಸದ್ಗುರುಗಳ ಮುಖ್ಯ ಶಿಷ್ಯನಾದನು. ಬ್ರಹ್ಮಜ್ಞಾನದ ಇಡಿ ಗಂಟನ್ನು ಈತನಿಗೇ ಸಮರ್ಪಿಸಬೇಕಾದ್ದರಿಂದ ಈತನನ್ನೇ ಅವರು ಹಲವು ಬಗೆಗಳಿಂದ ಪರೀಕ್ಷಿಸಿದರು. ಒಂದು ದಿನ ತುಕಾರಾಮಸಾಧುಗಳು ಗಣಪತಿಯೊಡನೆ ಎಲ್ಲಿಗೋ ಹೊರಟಿದ್ದರು. ದಾರಿಯಲ್ಲಿ ಒಬ್ಬ ಕೃಷಿವಲನು ಕಬ್ಬಿನ ಹೊರೆಯನ್ನು ಹೊತ್ತುಕೊಂಡು ಹೋಗುತ್ತಿದ್ದನು. ಸಾಧುಗಳು ಅವನನ್ನು ನೋಡಿ ಗಣಪತಿಯನ್ನು ಕುರಿತು ಆಜ್ಞೆ ಮಾಡಿದರೇನಂದರೆ—ಗಣಪತಿ, ಇವನಿಗೆ ನಾಲ್ಕು ಗುದಿಕೆಗಳನ್ನು ಕೊಟ್ಟು ಅವನ ಮೇಲಿನ ಹೊರೆಯನ್ನು ಕಸಿದುಕೊಂಡು ಬಾ'' ಗುರ್ವಾಜ್ಞೆಯಂತೆ ಗಣಪತಿಯು ಆ ಒಕ್ಕಲಿಗನ ಮೇಲೆ ಹೋದನು. ಮತ್ತು ಆ ಒಕ್ಕಲಿಗನಿಗೆ ನಾಲ್ಕು ಏಟುಗಳನ್ನು ಕೊಟ್ಟನು. ಅದರಿಂದ ಆತನು ಸಿಟ್ಟಿಗೆದ್ದು ತಲೆಯ ಮೇಲಿನ ಹೊರೆಯನ್ನು ಚಲ್ಲಿ ಗಣಪತಿಯೊಡನೆ ಹೊಡದಾಟಕ್ಕೆ ಪ್ರಾರಂಭಿಸಿದನು. ಅವರಿಬ್ಬರ ತಿಕ್ಕಾಟದಲ್ಲಿ ಗಣಪತಿಯು ಬಹಳ ನುಗ್ಗಾದನು. ಆದರೂ ಗುರು

ಸ್ಮರಣೆ ಮಾಡುತ್ತ ಆ ಒಕ್ಕಲಿಗನನ್ನು ಹಿಚುಕಿದನು. ಗಣಪತಿಯು ಕಸುವು ಹೆಚ್ಚಾದ್ದರಿಂದ ಆ ಒಕ್ಕಲಿಗನು ಹಣ್ಣಾಗಿ ಹೇಳಿಕೊಳ್ಳಲಾರಂಭಿಸಿದನು. ಬಳಿಕ ಗಣಪತಿಯು ಅವನನ್ನು ಬಿಟ್ಟು ಹೊರೆಯನ್ನು ಹೊತ್ತುಕೊಂಡು ಗುರುಗಳನ್ನು ಬೆನ್ನಟ್ಟಿ ಓಡುತ್ತ ನಡೆದನು. ಮುಂದೆ ಒಂದೆರಡು ಮೈಲು ದೂರ ಹೋದ ಬಳಿಕ ಗುರುಗಳು ಒಂದು ಗಿಡದಡಿಯಲ್ಲಿ ಕುಳಿತರು; ಗಣಪತಿಯೂ ಹೊರೆಯನ್ನಿಳಿಸಿ ಕುಳಿತುಕೊಂಡನು. ಅಷ್ಟರಲ್ಲಿ ಒಬ್ಬ ಸ್ತ್ರೀಯು ಮಾವಿನ ಕಾಯಿಗಳನ್ನು ತುಂಬಿದ ಬುಟ್ಟಿಯನ್ನು ಹೊತ್ತುಕೊಂಡು ದಾರಿ ಹಿಡಿದು ಬಂದಳು. ಕೂಡಲೆ ಸಾಧುಗಳು ಆಕೆಯಿಂದ ಆ ಬುಟ್ಟಿಯನ್ನು ಕಸಿದು ತರಲು ಶಿಷ್ಯನಿಗೆ ಆಜ್ಞಾಪಿಸಿದರು. ಗಣಪತಿಯು ಧಾವಿಸಿ ಹೋಗಿ ಬುಟ್ಟಿಯನ್ನು ಕಸಿದುಕೊಂಡು ಬಂದನು. ಆ ಸ್ತ್ರೀಯು ನಿರುಪಾಯಳಾಗಿ ಗಣಪತಿಯನ್ನು ಬೈಯುತ್ತ ಮನೆಯ ಕಡೆಗೆ ಹೊರಟು ಹೋದಳು.

ತುಕಾರಾಮಸಾಧುಗಳು ಮಾವಿನಕಾಯಿಗಳ ಬುಟ್ಟಿಯನ್ನು ಮುಂದಿಟ್ಟುಕೊಂಡು ಕುಳಿತು ಗಣಪತಿಯನ್ನು ಕುರಿತು ನುಡಿದರೇನಂದರೆ—ಗಣಪತಿ! ಈ ಮಾವಿನ ಕಾಯಿಗಳನ್ನು ಒಂದೊಂದರಂತೆ ನಿನ್ನ ತಲೆಗೆ ಹೊಡೆಯಬೇಕೆಂದು ನಮಗೆ ಅಪೇಕ್ಷೆಯಾಗಿದೆ. ನೀನು ಅಳಬಾರದು. ಒಂದು ಹನಿ ನೀರು ಕೂಡ ಕಣ್ಣಲ್ಲಿ ಬರಲಾಗದು, ಹಾಗಿದ್ದರೆ ಹೇಳು. ಅಂದರೇ ನೀನು ನಮಗೆ ಶಿಷ್ಯನು.'' ಗುರುಗಳ ಈ ಅಪ್ಪಣೆಯನ್ನು ಕೇಳಿ ಗಣಪತಿಯು ನಕ್ಕನು. ಮತ್ತು ನುಡಿದನೇನಂದರೆ—''ಮಹಾರಾಜ, ಇದು ಯಾವ ದೊಡ್ಡ ಮಾತು; ಈ ದೇಹವು ತಮಗೇ ಅರ್ಪಿತವಾಗಿದೆ. ಈ ದೇಹದ ಮೇಲೆ ನಿಮ್ಮ ಸ್ವಾಮಿತ್ವವಿದ್ದದ್ದರಿಂದ ಬೇಕಾದದ್ದನ್ನು ಮಾಡ ಬಹುದು'' ಪ್ರಿಯವಾಚಕರೇ, ಗಣಪತಿಯ ಮುಖದಿಂದ ಹೊರಟ ಈ ವಾಣಿಯು ಅನ್ಯರ ಮುಖದಿಂದ ಹೊರಡ ಬಹುದೇ? ಗಣಪತಿಯು ಗುರುಗಳ ಮುಂದೆ ಪದ್ಮಾಸನ ಹಾಕಿ ಕಣ್ಣು ಮುಚ್ಚಿ

ಕೊಂಡು ಗುರುಧ್ಯಾನ ಮಾಡುತ್ತ ಕುಳಿತುಕೊಂಡನು. ಗುರುಗಳು ಒಂದೊಂದೇ ಮಾವಿನ ಕಾಯಿಗಳನ್ನು ತಕ್ಕೊಂಡು ಅವನ ತಲೆಗೆ ಹೊಡೆಯ ಹತ್ತಿದರು. ಆ ಬುಟ್ಟಿಯೊಳಗಿನ ಕಾಯಿಗಳು ತೀರುವವರೆಗೂ ಹೊಡೆದರು. ಗಣಪತಿಯು ಕಣ್ಣಲ್ಲಿ ಒಂದು ತೊಟ್ಟು ನೀರು ಕೂಡಾ ಬರಲಿಲ್ಲ. ಆತನ ಗುರುಭಕ್ತಿಯನ್ನೂ, ದೇಹದ ಮೇಲಿನ ನಿರ್ಮೋಹತ್ವ ವನ್ನೂ ನೋಡಿ ಗುರುಗಳು ತುಂಬಾ ಸಂತುಷ್ಟರಾದರು. ಬಳಿಕ ಅವರು ಬಾಳಾ, ಏಳು ಹೋಗೋಣ ಎಂದು ಒದರಿದರು. ಗಣಪತಿಯು ಧ್ಯಾನವಿ ಸರ್ಜನೆ ಮಾಡಿ ಕಣ್ಣು ತೆರೆದನು. ಮಾವಿನಕಾಯಿಯ ಹೊಡತದಿಂದ ತಲೆಬುರುಡಿಯು ಹಣ್ಣು ಹಣ್ಣು ಆಗಿತ್ತು. ಆ ಅಸಹ್ಯ ವೇದನೆಯನ್ನು ಸಹಿಸಿಕೊಂಡು ಗುರುಗಳೊಡನೆ ಪ್ರಯಾಣ ಬೆಳೆಸಿದನು.

ಹೀಗೆ ಕೆಲವು ದಾರಿಯನ್ನು ಕ್ರಮಿಸುತ್ತಿರಲು, ಒಂದು ಹಳ್ಳಿಯು ಹತ್ತಿತು. ಆ ಹಳ್ಳಿಯ ಸೆರೆಯಲ್ಲಿ ಅನೇಕ ಹುಡುಗರು ಆಡುತ್ತಿದ್ದರು. ಆಗ ತುಕಾರಾಮ ಸಾಧುಗಳು ಗಣಪತಿಯನ್ನು ಕುರಿತು—ಗಣಪತೀ, ಈ ಹುಡುಗರಲ್ಲಿ ಒಬ್ಬನನ್ನು ಆ ಬಳಿಯಲ್ಲಿರುವ ತೆಗ್ಗಿನಲ್ಲಿ ದೂಡಿ ಮೇಲೆ ಆ ದಿಬ್ಬದ ಮಣ್ಣನ್ನೆಳೆ; ಬಳಿಕ ರಾಮನಾಮದ ಘೋಷಮಾಡುತ್ತ ಆ ತೆಗ್ಗಿನಮೇಲೆ ಕುಣಿದಾಡು, ಯಾರು ಬಂದು ಏನುಮಾಡಿದರೂ ಮಾತಾ ಡಬೇಡ; ಎಂದು ಅಪ್ಪಣೆಮಾಡಿ ಅಲ್ಲಿಂದ ಹೊರಟು ಹೋದರು. ಗಣ ಪತಿಯು ಗುರ್ವಾಜ್ಞೆಯನ್ನು ಶಿರಸಾವಹಿಸಿ ಆ ಹುಡುಗರ ಬಳಿಗೆ ಹೋ ದನು. ಅವರಲ್ಲಿ ಒಬ್ಬ ಎಡಹುಡುಗನನ್ನು ನೋಡಿ ಆ ತೆಗ್ಗಿನಲ್ಲಿ ದೂಡಿ ಮೇಲೆ ಯಥೇಷ್ಟವಾಗಿ ಮಣ್ಣನ್ನೆಳೆದು ರಾಮ-ರಾಮ ಅನ್ನುತ್ತ ಕುಣಿಯ ಹತ್ತಿದನು. ಈ ಭಯಂಕರ ಕೃತ್ಯವನ್ನು ನೋಡಿ ಉಳಿದ ಹುಡುಗರು ಅಂಜಿ ದಿಕ್ಕು ಪಾಲಾಗಿ ಓಡಿದವು. ಮತ್ತು ಗಣಪತಿಯು ಯಾವ ಹುಡು ಗನನ್ನು ತೆಗ್ಗಿನಲ್ಲಿ ದೂಡಿ ತುಳಿಯುತ್ತಿದ್ದನೋ ಆ ಹುಡುಗನ ಮನೆಗೆ ಹೋಗಿ ಅವನ ತಾಯಿ-ತಂದೆಗಳ ಮುಂದೆ ಹೇಳಿದರು. ಯಾವನೋ

ದುಷ್ಟ ಬೈರಾಗಿಯು ತಮ್ಮ ಮಗನನ್ನು ಕೊಂದನೆಂದು ಆ ಹುಡುಗನ ತಾಯಿ-ತಂದೆಗಳು ಆಕ್ರೋಶ ಮಾಡುತ್ತ ಅಲ್ಲಿಗೆ ಬಂದರು. ಗಣಪತಿಯು ಗುರ್ವಾಜ್ಞೆಯಂತೆ ಭಜನ ಮಾಡುತ್ತ ತೆಗ್ಗಿನ ಮೇಲೆ ನರ್ತನ ಮಾಡುತ್ತಲೇ ಇದ್ದನು. ಆ ಹುಡುಗನ ತಾಯಿ-ತಂದೆಗಳಿಗೆ ಅತ್ಯಂತ ಸಂತಾಪವಾಯಿತು. ಅವರು ಕೈಯಲ್ಲಿ ಡೊಣ್ಣೆಯನ್ನು ಹಿಡಿದುಕೊಂಡೇ ಬಂದಿದ್ದು ಅದರಿಂದ ಗಣಪತಿಯನ್ನು ಮೈಮುರಿ ಥಳಿಸಲಾರಂಭಿಸಿದರು. ಅವರು ಎಷ್ಟು ಹೊಡೆದರೂ ಗಣಪತಿಯು ಪಿಟ್ಟೆಂದು ಮಾತಾಡಲಿಲ್ಲ. ರಾಮನಾಮವನ್ನು ಉಚ್ಚರಿಸುತ್ತ ಹಾಗೇ ಕುಣಿಯುತ್ತಲಿದ್ದನು. ಅಷ್ಟರಲ್ಲಿ ತುಕಾರಾಮಸಾಧುಗಳು ಅಲ್ಲಿಗೆ ಬಂದು " ಹೊಡೆಯಿರಿ ಇವನನ್ನು ಇನ್ನಿಷ್ಟು ಹೊಡೆಯಿರಿ. ಬೇಡವೆಂದು ಹೇಳಿದರೂ ಆ ಹುಡುಗನನ್ನು ತೆಗ್ಗಿನಲ್ಲಿ ದೂಡಿ ಮೇಲೆ ಮಣ್ಣು ಮುಚ್ಚಿ ಕುಣಿಯುತ್ತಿರುವನು. ಇಂಥ ಕೊಲೆಗಡಕನನ್ನು ಸುಮ್ಮನೆ ಬಿಡುವದುಂಟೇ! ಹೊಡೆಯಿರಿ ಎಂದು ನುಡಿದರು. ಗಣಪತಿಯ ಮೈ ನುಗ್ಗಾಗಿ ಹೋಯಿತು. ಮೈಯೊಳಗಿನ ಎಲವುಗಳು ಲಿಕಿಲಿಕಿಯಾಗಿ ಹೋದವು. ಕೈಕಾಲುಗಳ ಸಂದುಗಳು ಮುರಿದವು. ಇಷ್ಟಾದರೂ ಆತನು ಹಾಯ್ ಎಂದು ನುಡಿಯಲಿಲ್ಲ. ರಾಮಧ್ಯಾನದಲ್ಲಿಯೇ ಮಗ್ನನಾಗಿದ್ದನು. ಆಗ ಗುರುಗಳಿಗೆ ದಯ ಬಂದಿತು. ಅವರು ತೆಗ್ಗಿನಲ್ಲಿ ದೂಡಿದ್ದ ಹುಡುಗನ ಹೆಸರುಗೊಂಡು ಕೂಗಿದರು. ಕೂಡಲೆ ಆ ಹುಡುಗನು ಎಲ್ಲಿಂದಲೋ ಓಡಿಬಂದು ತನ್ನ ತಂದೆಯ ಕೊರಳಿಗೆ ತೆಕ್ಕಿಬಿದ್ದು, "ಅಪ್ಪಾ ಇಲ್ಲೇಕೆ ಬಂದಿರುವೆ? ಇತನನ್ನೇಕೆ ಹೊಡೆಯುವೆ" ಎಂದು ಕೇಳಿದನು. ಮಗನು ಸತ್ತನೆಂದು ಸಂತಾಪಗೊಂಡಿದ್ದ ಆತನು ಬೆಚ್ಚಿಬಿದ್ದು ಮಗನನ್ನು ದಿಟ್ಟಿಸಿ ನೋಡಿ ಗಣಪತಿಯು ಹೊಡೆಯುವದನ್ನು ಬಿಟ್ಟು ಆ ಗುರು-ಶಿಷ್ಯರನ್ನು ಆಶ್ಚರ್ಯದಿಂದ ನೋಡುತ್ತ ನಿಂತನು. ಇವರಾರೋ ಮಹಾತ್ಮರು ಇರಬಹುದೆಂದು ತರ್ಕಿಸಿ ಆತನು ಅವರ ಕ್ಷಮೆ ಬೇಡಿ ಮಗನನ್ನು ಕರೆದುಕೊಂಡು ಮನೆಗೆ ಹೊರ

ಟು ಹೋದನು. ಇತ್ತ ತುಕಾರಾಮಸಾಧುಗಳು ಗಣಪತಿಯ ಮೈ ಮೇಲೆ ಕೈಯಾಡಿಸಿದರು. ಕೂಡಲೆ ಅವನ ಮೈ ನೋವು ಹೊರಟು ಹೋಯಿತು. ತಪ್ಪಿದ ಕೈಕಾಲು ಸಂದುಗಳು ನೆಟ್ಟಗಾದವು. ಗುರು ಹಸ್ತಸ್ಪರ್ಶದಿಂದ ಅವನು ಮೊದಲಿನಕ್ಕಿಂತಲೂ ತೇಜಸ್ವಿಯಾದನು. ಆಗ ಸಾಧುಗಳು—ಬಾಳಾ ನಿನಗೆ ವೃಥಾ ದುಃಖಕೊಟ್ಟೆನು. ಈಗ ದೇಹ ದುಃಖವು ನಿವೃತ್ತಿಯಾಯಿತಷ್ಟೇ; ನಿನ್ನಂಥ ಶಿಷ್ಯೋತ್ತಮನು ದೊರ ಕಿದ್ದು, ನಮ್ಮ ಸುದೈವವೇ ಸರಿ. ಸಚ್ಛಿಷ್ಯನ ಅಭಿಯೋಗವಾದರೇ ಸದ್ಗುರುವು ಹುಟ್ಟಿದ್ದಕ್ಕೆ ಸಾರ್ಥಕ್ಯವು. ಇಲ್ಲದಿದ್ದರೆ ಸದ್ಗುರುವಿಗೆ ಉಪ ವಾಸವಾದಂತಾಗುವದು. ಅಪ್ಪಾ ಸಚ್ಛಿಷ್ಯನೇ, ನೀನು ನನಗೆ ಪಾರಣೆ ಯನ್ನು ಮಾಡಿಸಿದಿ. ನೀನು ಬ್ರಹ್ಮಜ್ಞಾನಾಮೃತಪಾನಕ್ಕೆ ಯೋಗ್ಯ ಅಧಿ ಕಾರಿ ಇರುವಿ ಎಂದು ನುಡಿದು ಶಿಷ್ಯನೊಡನೆ ಊರಿಗೆ ಹೊರಟು ಹೋದರು.

ಇಷ್ಟಕ್ಕೇ ಅವರು ಶಿಷ್ಯಪರೀಕ್ಷೆಯ ತಮ್ಮ ವೃತ್ತಿಯನ್ನು ಬಿಡ ಲಿಲ್ಲ. ಒಂದು ಸಮಯದಲ್ಲಿ ಗಣಪತಿಯನ್ನು ಆಳವಾದ ನೀರಿನ ಮಡುವಿ ನಲ್ಲಿ ದಬ್ಬಿಕೊಟ್ಟರು. ಗುರುಗಳು ಮೇಲಕ್ಕೆ ಬರಲು ಅಪ್ಪಣೆ ಮಾಡಿಲ್ಲ ವೆಂದು ತಿಳಿದು ಆತನು ನೀರಿನ ತಳಕ್ಕೆ ಹೋಗಿ ಸಮಾಧಿಯನ್ನು ಧರಿಸಿ ಪದ್ಮಾಸನಸ್ಥನಾಗಿ ಕುಳಿತು ಬಿಟ್ಟನು. ಈ ಮಾತಿಗೆ ಎಷ್ಟೋ ದಿವಸಗಳು ಕ್ರಮಿಸಿದವು. ಮುಂದೆ ಒಂದು ದಿನ ತುಕಾರಾಮಸಾಧುಗಳು ಆ ಜಲಾಶಯಕ್ಕೆ ಹೋಗಿ—ಗಣಪತೀ, ಮೇಲಕ್ಕೆ ಬಾ'' ಎಂದು ಕರೆ ದರು. ಕೂಡಲೆ ಆತನು ಸಮಾಧಿಯನ್ನು ವಿಸರ್ಜಿಸಿ ಮೇಲಕ್ಕೆ ಬಂದು ಗುರುಚರಣಗಳಿಗೆ ಪೊಡಮಟ್ಟನು. ಆತನ ಅಪ್ರತಿಮ ಕಾಂತಿಯನ್ನು ನೋಡಿ ಗುರುಗಳು ಸಂತೋಷಬಟ್ಟು, ಬಾಳಾ, ನೀನು ಇಷ್ಟುದಿನ ನೀರ ಲ್ಲಿದ್ದು. ತಪಶ್ಚರ್ಯ ಮಾಡಿರುವೆ. ಆ ತಪಶ್ಚರ್ಯದಿಂದ ಶಕ್ತಿಸಂಪನ್ನನಾ ಗಿದ್ದರೆ ಈ ಅಶ್ವತ್ಥವೃಕ್ಷದ ಎಲೆಗಳನ್ನು ಏಕಕಾಲಕ್ಕೆ ಉದುರಿಸಿ ಪುನಃ

ಅವು ಮೊದಲಿನಂತೆ ಗಿಡಕ್ಕೆ ಅಂಟಿಕೊಳ್ಳುವಂತೆ ಮಾಡು ಎಂದು ನುಡಿದರು. ಆಗ ಗಣಪತಿಯು—ಮಹಾರಾಜ, ತಮ್ಮ ಚರಣಗಳ ಕೃಪೆಯಿರುತ್ತಿರಲು ಇದಾವ ದೊಡ್ಡ ಮಾತು? ಎಂದು ನುಡಿದು ಗುರುಗಳ ಚರಣತೀರ್ಥವನ್ನು ಪ್ರೋಕ್ಷಿಸಿದನು ಕೂಡಲೆ ಎಲ್ಲ ಎಲೆಗಳುದುರಿ ಮೊದಲಿನಂತೆ ಮತ್ತೆ ಹತ್ತಿಕೊಂಡವು. ಅದನ್ನು ಕಂಡು ಸಾಧುಗಳು ಸಂತುಷ್ಟರಾಗಿ ಗಣೂ, ನೀನು ಮನುಷ್ಯನಲ್ಲ. ನಿನ್ನಲ್ಲಿ ಅದ್ಭುತ ಶಕ್ತಿಯಿರುತ್ತದೆ. ಮೂರ್ತಿಮಂತ ಬ್ರಹ್ಮನೇ ಚೈತನ್ಯಗೊಂಡಂತೆ ನಿನ್ನಲ್ಲಿ ಸಾಮರ್ಥ್ಯವಿರುತ್ತದೆ. ಆದ್ದರಿಂದ ಇನ್ನು ಮುಂದೆ ನಿನಗೆ 'ಬ್ರಹ್ಮಚೈತನ್ಯ'ನೆಂದು ಕರೆಯುವೆನು. ಇದೇ ಹೆಸರಿನಿಂದಲೇ ನೀನು ಪ್ರಸಿದ್ಧನಾಗಿ ಲೋಕೋದ್ಧಾರವನ್ನು ಮಾಡು. ಎಂದು ಆಶೀರ್ವದಿಸಿದರು. ಗುರಗಳ ಈ ಆಶೀರ್ವಾದದಿಂದ ಗಣಪತಿಯೆಂಬ ಹೆಸರು ಹಿಂದಕ್ಕೆ ಬಿದ್ದು, ಬ್ರಹ್ಮಚೈತನ್ಯನೆಂಬ ಹೆಸರು ಬೆಳಕಿಗೆ ಬಂದಿತು. ಪ್ರಿಯವಾಚಕರೇ, ಸದ್ಗುರುಕೃಪೆಯಿಂದ ನಮ್ಮ ಚರಿತ್ರನಾಯಕರು ಬ್ರಹ್ಮಾನುಭವವನ್ನು ಹೊಂದಿ ಬ್ರಹ್ಮಚೈತನ್ಯರೆಂಬ ಹೆಸರನ್ನು ಧರಿಸಿದ್ದರಿಂದ ನಾವಾದರೂ ಇನ್ನು ಮುಂದೆ ಇವರಿಗೆ ಬ್ರಹ್ಮಚೈತನ್ಯರೆಂತಲೇ ಕರೆಯೋಣ, ಇನ್ನು ಮುಂದೆ ಇವರ ಅಗಾಧವಾದ ಸಾಮರ್ಥ್ಯವೂ ಶಿಷ್ಯವಾತ್ಸಲ್ಯವೂ ಪ್ರಕಟವಾದ ಸಂಗತಿಗಳು ಬರುವವು. ಮಹಾತ್ಮರ ಮಹಿಮೆಯನ್ನು ಸಂಪೂರ್ಣವಾಗಿ ವರ್ಣಿಸಲು ಅದಾವನಲ್ಲಿ ಸಾಮರ್ಥ್ಯವಿರುವದು? ಇರಲಿ.

ಬ್ರಹ್ಮಚೈತನ್ಯರು ಸದ್ಗುರುವನ್ನು ತೃಪ್ತಿಪಡಿಸಿ ಅವರಿಂದ ಅನುಗ್ರಹೀತರಾದರು. ಗುರುಸೇವೆಯನ್ನು ಮಾಡಬೇಕಾದರೆ ದೇಹಾಭಿಮಾನವನ್ನು ತ್ಯಾಗ ತೊರೆದು ಬಿಡಬೇಕೆಂಬದನ್ನೂ ದೇಹದ ಮೇಲಿನ ಮೋಹವನ್ನು ತ್ಯಾಗ ಬಿಡಬೇಕೆಂಬದನ್ನೂ ಇವರು ಜಗತ್ತಿಗೆ ತೋರಿಸಿಕೊಟ್ಟರು. ದೇಹದ ಮೇಲೆ ಮೋಹವನ್ನಿರಿಸಿ ಸಾಯುವ ವರೆಗೆ ಗುರು ಸೇವೆ ಮಾಡಿದರೂ ಗುರ್ವನುಗ್ರಹವು ಆಗಲಾರದು. ಆದರೆ ಅಧಿಕಾರಸಂಪನ್ನನಾದ

ಶಿಷ್ಯನು ಅಲ್ಪಾವಕಾಶದಲ್ಲಿಯೇ ಹ್ಯಾಗೆ ಕೃಪೆಗೆ ಪಾತ್ರನಾಗುವನೆಂಬುದಕ್ಕೆ ನಮ್ಮ ಚರಿತ್ರನಾಯಕರ ಉದಾಹರಣೆಯೊಂದೇ ಸಾಕು. ಗುರುಸೇವೆ ಮಾಡಬೇಕೆಂದು ಬಯಸುವವರು ನಮ್ಮ ಚರಿತ್ರನಾಯಕರಂತೆ ದೇಹದ ಮೇಲಿನ ಮಮತೆಯನ್ನು ಬಿಟ್ಟು ಸೇವೆ ಮಾಡಬೇಕು. ಅಂದರೆ ಅನುಗ್ರಹಕ್ಕೆ ಪಾತ್ರತೆಯನ್ನು ಹೊಂದುವರು.

---

## ೭ನೆಯ ಅಧ್ಯಾಯ:—ಕಾಶೀಕ್ಷೇತ್ರವಾಸ

ಈ ಮೇರೆಗೆ ನಮ್ಮ ಚರಿತ್ರನಾಯಕರು ಸದ್ಗುರುಕೃಪೆಯನ್ನು ಸಂಪಾದಿಸಿ, ಬ್ರಹ್ಮಚೈತನ್ಯರೆಂಬ ಹೆಸರನ್ನು ಹೊಂದಿದ ಬಳಿಕ ಗುರುಗಳ ಪ್ಪಣೆ ಪಡೆದು ಎಳಿಗಾಂವವನ್ನು ಬಿಟ್ಟು ಹೊರಟರು. ಅವರು ನೆಟ್ಟಗೆ ಕಾಶೀಕ್ಷೇತ್ರಕ್ಕೆ ಹೊರಟರು. ಅಲ್ಲಿ ಕೆಲದಿನ ವಾಸ ಮಾಡಿದರು. ಅವರು ಸರ್ವದಾ ಬ್ರಹ್ಮಾನಂದಸ್ಥಿತಿಯಲ್ಲಿಯೇ ಇರುತ್ತಿದ್ದದರಿಂದ ಅವರು ಬ್ಬರ ಕೂಡ ಮಾತಾಡುತ್ತಿರಲಿಲ್ಲ. ಕಥೆಯಾಡುತ್ತಿರಲಿಲ್ಲ. ಕಾಶೀಕ್ಷೇತ್ರಸ್ಥರು ಇವನು ಯಾವನೋ ಒಬ್ಬ ಉನ್ಮಾದ ವೃತ್ತಿಯ ಮನುಷ್ಯನೆಂದು ತಿಳಿದು ಬಿಟ್ಟಿದ್ದರು. ಆಗ ಇವರಿಗೆ ಒಳ್ಳೇ ತಾರುಣ್ಯವು ಪ್ರಾಪ್ತವಾಗಿತ್ತು. ಇವರು ಆಹಾರವನ್ನು ತೆಗೆದುಕೊಳ್ಳದಿದ್ದರೂ ದೇದೀಪ್ಯವಾದ ಕಾಂತಿಯಿಂದೊಪ್ಪುತ್ತಿದ್ದರು. ಕಾಶಿಯಲ್ಲಿ ಅವರ ಯೋಗ್ಯತೆಯನ್ನು ಯಾರೂ ಕಂಡು ಹಿಡಿಯಲಿಲ್ಲ.

ಹೀಂಗೆ ಇರುತ್ತಿರಲು ಒಬ್ಬ ಯತಿಯು ಕಾಶಿಯಲ್ಲಿ ಬಹುದಿವಸ ವಾಸ ಮಾಡಿ ಕೃಷ್ಣಪರಮಾತ್ಮನನ್ನು ಪ್ರಸನ್ನೀಕರಿಸಿಕೊಳ್ಳಬೇಕೆಂದು ಹಗಲಿರಳೂ ತಪಸ್ಸು ಮಾಡುತ್ತಿದ್ದನು. ಅವನ ಭಕ್ತಿಗೆ ಮೆಚ್ಚಿದ ಶ್ರೀಕೃಷ್ಣನು—"ಎಲೈ ಭಕ್ತನೇ, ನೀನು ವೃಥಾ ಕಷ್ಟಪಡಬೇಡ; ಹರಿಶ್ಚಂದ್ರ ಘಾಟಿನಲ್ಲಿ ಒಬ್ಬ ಸತ್ಪುರುಷನಿರುವನು; ಆತನ ದರ್ಶನವನ್ನು

ಹೊಂದು ಆಂಗರೆ ಉದ್ಧೃತನಾಗುವ'' ಎಂದು ದೃಷ್ಟಾಂತದಲ್ಲಿ ಹೇಳಿದನು. ಯತಿಯು ಎಚ್ಚತ್ತು ಭಗವಂತನ ಆಜ್ಞೆಯಂತೆ ಮರುದಿನ ಹರಿಶ್ಚಂದ್ರ ಘಾಟಿನಲ್ಲಿ ಯಾರು ಸತ್ಪುರುಷರಿರುವರೆಂದು ಶೋಧ ಮಾಡಿದನು. ಆದರೆ ಸತ್ಪುರುಷರ ಶೋಧವು ಆವನಿಗಾಗಲಿಲ್ಲ. ಹೀಗೆ ಎರಡು ಮೂರು ದಿನ ಆ ಘಾಟಿನಲ್ಲಿಯೇ ಶೋಧ ಮಾಡುತ್ತಿರಲು ಒಂದು ದಿನ ರಾತ್ರಿಯಲ್ಲಿ ರಾಮಭಜನೆಯನ್ನು ಮಾಡುತ್ತ ಉನ್ಮನೀ ಅವಸ್ಥೆಯಲ್ಲಿ ಕುಣಿದಾಡುವ ನಮ್ಮ ಚರಿತ್ರನಾಯಕರನ್ನು ಕಂಡನು. ಆಗ ಅವನಿಗೆ ಅವರನ್ನು ನೋಡಿದ ಕೂಡಲೆ ಭಕ್ತಿಯುಂಟಾಯಿತು. ಕೂಡಲೆ ಯತಿಯು ಧಾವಿಸಿಹೋಗಿ ಅವರ ಚರಣಗಳನ್ನು ಗಟ್ಟಿಯಾಗಿ ಹಿಡಿದನು. ಪರರ ಹಸ್ತಸ್ಪರ್ಶವಾಗಲು ಕೃಷ್ಣ ಚೈತನ್ಯಮಹಾರಾಜರು ಕಣ್ಣುತೆರೆದು ನೋಡುತ್ತಾರೆ; ಓರ್ವ ಯತಿಯು ಚರಣಕ್ಕೆರಗಿದ್ದನು. ತಾವು ಗೃಹಸ್ಥಾಶ್ರಮಿಗಳು; ಯತಿಗಳಿಂದ ನಮಸ್ಕರಿಸಿಕೊಳ್ಳಬಾರದೆಂದು ತಟ್ಟನೆ ದೂರ ಸರಿದು—ಇದೇನು! ಸ್ವಾಮೀ, ನೀವು ಯತಿಗಳಿದ್ದು ನನಗೆ ಹೀಗೆ ನಮಸ್ಕರಿಸಬಹುದೇ? ''ಪಾಪೋಹಂ ಪಾಪಕರ್ಮಾಹಂ'' ಎಂದು ನುಡಿದರು. ಯತಿಯು ಕೈಜೋಡಿಸಿ—ಮಹಾರಾಜ, ನಾನು ಯತಿಯಾದರೂ ಕೇವಲ ವೇಷಧಾರಿಯು; ತಾವು ಯತಿವೇಷವನ್ನು ಧರಿಸದಿದ್ದರೂ ನಿಜವಾದ ಯತಿಗಳಿರುವಿರಿ. ನನ್ನನ್ನು ಕೃತಾರ್ಥನನ್ನಾಗ ಮಾಡಬೇಕು. ಬಹು ದಿನ ತಪಸ್ಸು ಮಾಡುತ್ತಲಿದ್ದರೂ ಮನಸ್ಸಿಗೆ ಶಾಂತಿಯು ದೊರೆಯಲೊಲ್ಲದು. ಎಂದು ಬೇಡಿಕೊಂಡನು. ಆಗ ಮಹಾರಾಜರು ದಯಾವಂತರಾಗಿ. ಯತಿಗಳೇ ಯೋಚನೆ ಮಾಡಬೇಡಿರಿ. ಭಗವಂತನ ದಯದಿಂದ ನಿಮಗೆ ಶಾಂತಿಯು ದೊರೆಯ ಬಹುದು ಎಂದು ನುಡಿದು ಅವರನ್ನು ಭಜನೆಗೆ ಹಚ್ಚಿದರು. ಅವರಿಬ್ಬರಲ್ಲಿ ಮೈತ್ರೀಭಾವವು ಚನ್ನಾಗಿ ಬೆಳೆಯಿತು. ಯತಿಗಳು ಮಹಾರಾಜರ ಮೇಲೆ ಬಹಳ ಮಮತೆ ಮಾಡಲಾರಂಭಿಸಿದರು. ಇಬ್ಬರೂ ಕೂಡಿಯೇ ಇರಲಾರಂಭಿಸಿದರು, ಆದರೂ ಯತಿಗಳಿಗೆ ಒಂದು ಬಗೆಯ

ಶಂಕೆಯು ಬಾಧಿಸಲಾರಂಭಿಸಿತು. ಮಹಾರಾಜರು ನಿಜವಾದ ಸಾಧುಗಳು ಹೌದೋ ಅಲ್ಲವೋ ಎಂಬ ವಿಕಲ್ಪವು ಹೋಗದಾಯಿತು. ಯಾವ ದೊಂದು ನಿಮಿತ್ತದಿಂದ ಇವರ ಸಾಧುತ್ವವನ್ನು ಪರೀಕ್ಷಿಸಬೇಕೆಂದು ಯತಿಗಳ ಮನಸ್ಸಿನಲ್ಲಿ ಹುಟ್ಟಿತು. ಹೀಗೆ ಯತಿಗಳಲ್ಲಿ ವಿಕಲ್ಪವು ಹುಟ್ಟು ತ್ತಿರಲು ಒಂದು ಚಮತ್ಕಾರವಾಯಿತು. ಅದೇನಂದರೆ—

ಕೃಷ್ಣಚೈತನ್ಯ ಮಹಾರಾಜರೂ ಯತಿಗಳೂ ಕೂಡಿ ಹರಿಶ್ಚಂದ್ರ ಘಾಟಿನಲ್ಲಿ ಕುಳಿತಿದ್ದರು. ಆ ಸಮಯದಲ್ಲಿ ದಹನವಿಧಿಗೋಸ್ಕರ ಒಂದು ಪ್ರೇತವನ್ನು ಅಲ್ಲಿಗೆ ತಂದರು. ಆ ಪ್ರೇತವು ಸ್ತ್ರೀಯದಾಗಿದ್ದು, ಆಕೆ ಯ ಗಂಡನೂ, ಮಕ್ಕಳೂ ಗೋಳಾಡುತ್ತ ಪ್ರೇತವನ್ನು ಹಿಂಬಾಲಿಸಿದ್ದರು. ಯತಿಗಳು ಈ ಸಂಧಿಯನ್ನು ಸಾಧಿಸಿ ಕೃಷ್ಣಚೈತನ್ಯರನ್ನು ಕುರಿತು— ಮಹಾರಾಜ, ದಹನಕ್ಕಾಗಿ ತಂದಿರುವ ಆ ಪ್ರೇತವನ್ನು ಸಜೀವಗೊಳಿಸ ಬೇಕು. ಯಾಕಂದರೆ ಆ ಸ್ತ್ರೀಯು ಮರಣದಿಂದ ಬಹಳ ಅನರ್ಥವಾದಂತೆ ತೋರುತ್ತದೆ. ಆಕೆಯ ಸಣ್ಣ ಮಕ್ಕಳೂ ಗಂಡನೂ ಗೋಳಾಡುತ್ತಿರು ವರು. ಈ ಪ್ರೇತವನ್ನು ಸಜೀವಗೊಳಿಸಿದರೆ ಈ ದುಃಖಿತರಿಗೆ ಸುಖ ಕೊಟ್ಟಂತಾಗುವದು. ಇಷ್ಟು ಕೆಲಸವು ತಮ್ಮಿಂದಾಗಬೇಕೆಂದು ಪ್ರಾರ್ಥಿ ಸುತ್ತೇನೆ" ಎಂದು ನುಡಿದರು.

ಯತಿಯ ಮಾತು ಕೇಳಿ ಮಹಾರಾಜರು ನಕ್ಕರು. ಯತಿಗಳೇ, ನೀವು ಹುಚ್ಚರಿದ್ದೀರಿ. ಈ ಕಾಶೀಕ್ಷೇತ್ರದಲ್ಲಿ ದಿನಾಲು ಅಸಂಖ್ಯ ಜನರು ಸಾಯುತ್ತಿರುವರು. ಮರಣವೆಂದರೆ ಮಾನವಪ್ರಾಣಿಗಳಿಗೆ ಅತ್ಯಂತ ದಾರುಣಪ್ರಸಂಗವೇ ಸರಿ. ಆದ್ದರಿಂದ ಯಾರಾದರೂ ಸತ್ತರೆ ಅವರ ಆಪ್ತೇಷ್ಟರು ಗೋಳಾಡುವದು ಸ್ವಾಭಾವಿಕವೇ ಸರಿ. ಸತ್ತವರನ್ನೆಲ್ಲ ಬದುಕಿಸುತ್ತ ಹೋದರೆ ನಾವು ಅದೇ ಉದ್ಯೋಗವನ್ನೇ ಮಾಡಬೇಕಾ ದೀತು. ಲೋಕದಲ್ಲಿ ಹುಟ್ಟಿದ ಪ್ರಾಣಿಗಳಿಗೆ ಮರಣ ಬರುವದು ಸ್ವಾಭಾ ವಿಕವಾದ್ದರಿಂದ ವಿಷಯಾಂಧರಾದ ಅವರ ಆಪ್ತೇಷ್ಟರು ಗೋಳಾಡುವಂತೆ

ನೀವೂ ಚಡಪಡಿಸುತ್ತಿರುವಿರಲ್ಲ! ಇದು ಯೋಗ್ಯವಲ್ಲ. ಭಗವಂತನ ಸೃಷ್ಟಿ ಕ್ರಮವು ಯಥಾಪ್ರಕಾರ ನಡಿಯುತ್ತಲಿರುವದು. ಆದರಲ್ಲಿ ನಮ್ಮಂಥ ವರು ಮಾಡುವದೇನು? ಎಂದರು. ಯತಿಗಳು ಮಹಾರಾಜರ ಈ ಮಾತುಗಳನ್ನು ಕಿವಿಯಲ್ಲಿ ಹಾಕಿಕೊಳ್ಳದೆ ಈ ಪ್ರೇತವನ್ನು ಬದುಕಿಸಿಯೇ ತೀರಬೇಕೆಂದು ಹಟ ಹಿಡಿದರು. ಆಗ ಮಹಾರಾಜರು—ಯತಿಗಳೇ, ನಿಮ್ಮ ಆಗ್ರಹದಂತೆ ಈ ಪ್ರೇತವನ್ನು ಸಜೀವಗೊಳಿಸಬಹುದು; ಆದರೆ ನಿಮಗೆ ನನ್ನ ವಿಯೋಗವು ಮಾತ್ರ ಆಗುವದು ಎಂದರು. ಅದಕ್ಕೆ ಯತಿ ಗಳು—ನಿಮ್ಮ ವಿಯೋಗವಾಗುವ ಕಾರಣವೇನು? ನೀವು ಹೋದಲ್ಲಿಗೆ ನಾನೂ ಬರುವೆನು ಎಂದರು. ಮಹಾರಾಜರು ಹಾಗೇ ಆಗಲಿ ಎಂದು ನುಡಿದು ಆ ಪ್ರೇತದ ಬಳಿಗೆ ಹೋಗಿ ಶ್ರೀರಾಮನಾಮವನ್ನುಚ್ಚರಿಸಿದರು. ಕೂಡಲೆ ಪ್ರೇತವು ಸಜೀವಗೊಂಡಿತು. ಆ ಸ್ತ್ರೀಯು ಎದ್ದು ಕುಳಿತು—ಮಹಾರಾಜರ ಕಡೆಗೆ ಬೊಟ್ಟು ಮಾಡಿ ಈ ಮಹಾತ್ಮರ ಕೃಪೆಯಿಂದ ನಾನು ಬದುಕಿದೆನು. ಇವರು ಪ್ರತ್ಯಕ್ಷ ಪರಮೇಶ್ವರರಿರುವರು. ಎಂದು ನುಡಿಯುತ್ತಿರಲು ಆಕೆಯ ಮಕ್ಕಳೂ ಗಂಡನೂ ಧಾವಿಸಿ ಮಹಾರಾಜರ ಬಳಿಗೆ ಬರತೊಡಗಿದರು. ಸ್ಮಶಾನಭೂಮಿಯಲ್ಲಿದ್ದವರೆಲ್ಲರೂ ಮಹಾರಾಜ ರಲ್ಲಿ ಭಯಭಕ್ತಿಯುಳ್ಳವರಾದರು. ಯತಿಗಳು ಆಶ್ಚರ್ಯದಿಂದ ಮಹಾ ರಾಜರನ್ನು ನೋಡತೊಡಗಿದರು. ಹೀಗೆ ಮಹಾರಾಜರ ದೈವೀತೇಜಸ್ಸಿ ನಿಂದ ಜನರು ದಂಗುಬಡಿದು ನಿಂತಿರಲು ಮಹಾರಾಜರು ಮನಸ್ಸಿನಲ್ಲಿ ಯೋಚಿಸಿದ್ದೇನಂದರೆ—"ಇನ್ನು ಮುಂದೆ ನಾವು ಇಲ್ಲಿ ಇರಬಾರದು. ಇದ್ದರೆ ದಿನಾಲು ಜನರು ನನ್ನ ಮುಂದೆ ಪ್ರೇತಗಳನ್ನು ತಂದು ಚೆಲ್ಲುವರು. ಈ ಕಲಿಯುಗದಲ್ಲಿ ಇಂಥ ಮಹತ್ಕೃತಿಗಳನ್ನು ಪ್ರಕಟ ಮಾಡುವದು ಬಲು ಕಷ್ಟವು. ಜನರು ಅದಕ್ಕೇ ಗಂಟು ಬೀಳುವರು. ಆದ್ದರಿಂದ ಈ ಸ್ಥಾನ ತ್ಯಾಗ ಮಾಡುವದೇ ವಿಹಿತವು."

ಈ ಮೇರೆಗೆ ಯೋಚಿಸಿ ಜನರು ತಮ್ಮ ಬಳಿಗೆ ಬರುವಷ್ಟರಲ್ಲಿ ಮಹಾರಾಜರು ಗಂಗಾನದಿಯಲ್ಲಿ ಧುಡುಂಮ್ಮನೆ ಹಾರಿಬಿಟ್ಟರು. ಜನರು ಅವರನ್ನು ಹುಡುಕಬೇಕೆಂದು ನೂರಾರು ಜನ ನಾವಾಡಿಗರನ್ನು ಕೂಡಿ ಹಾಕಿ ಪ್ರಯತ್ನಪಟ್ಟರು. ಎಲ್ಲವೂ ವ್ಯರ್ಥವಾಯಿತು. ಹೀಗೆ ಕಾಶಿಯಲ್ಲಿ ನದಿಯಲ್ಲಿ ಹಾರಿಕೊಂಡ ಮಹಾರಾಜರು ಒಮ್ಮೆಲೆ ಇಂದೂರಿನಲ್ಲಿ ಪ್ರಕಟ ರಾದರು. ಮಹಾರಾಜರ ಸಾಧುತ್ವವನ್ನು ಪರೀಕ್ಷಿಸಬೇಕೆಂದು ಮಾಡಿದ ಆ ಯತಿಗಳು ಮಾತ್ರ ಮೋರೆ ಸಪ್ಪಗೆ ಮಾಡಿಕೊಂಡು ಕುಳಿತರು. ಮುಂದೆ ಅವರು ಸ್ವಪ್ನದೃಷ್ಟಾಂತದಿಂದಲೇ ಸಮಾಧಾನ ಹೊಂದಿ ಜೀವ ನ್ಮುಕ್ತರಾದರು

---

## ೮ನೆಯ ಅಧ್ಯಾಯ—ಸಂಸಾರಾನುಭವ.

ಇಂದೂರಿನಲ್ಲಿ ಸದ್ಭಕ್ತರಿಗೆ ದರ್ಶನ ಕೊಟ್ಟು ಮಹಾರಾಜರು ಜನ್ಮಭೂಮಿಯ ದರ್ಶನಕ್ಕೆ ಗೋಂದಾವಲಿಗೆ ಬಂದರು. ಅವರು ಊರ ಹೊರಗಿನ ಮಾರುತಿಯ ದೇವಾಲಯದಲ್ಲಿಳಿದು ಅಗ್ನಿಷ್ಟಿಗೆಯನ್ನು ಹೊತ್ತಿಸಿ ಮೈಕಾಸುತ್ತ ಕುಳಿತರು. ಗುಡಿಯಲ್ಲಿ ಯಾವನೋ ಬಾವಾಜಿಯು ಬಂದಿರು ವನೆಂದು ಊರಜನರೆಲ್ಲರೂ ಬಂದು ನೋಡಿ ಹೋದರು. ಒಬ್ಬರಿಗೂ ಮಹಾರಾಜರ ಗುರ್ತು ಹತ್ತಲಿಲ್ಲ. ಮಹಾರಾಜರ ದೇಹವು ಅತ್ಯಂತ ಭವ್ಯ ವಾಗಿತ್ತು. ಗಡ್ಡ-ಮೀಸೆ, ಜಟೆಗಳು ಉದ್ದವಾಗಿ ಬೆಳೆದು ಅವರ ಮೊದಲಿನ ರೂಪಕ್ಕೂ ಈಗ್ಯೂ ಅಜಗಜಾಂತರವಾಗಿತ್ತು. ಎಷ್ಟೋ ಜನರು ಅವರೊಡನೆ ಮಾತು-ಕಥೆಗಳನ್ನಾಡಿದರು. ಸಂಜೆಯ ವರೆಗೆ ಹರಟೆ ಹೊಡೆದು ಮಹಾರಾ ಜರು ಊರ ಸಂಗತಿಗಳನ್ನೆಲ್ಲ ತಿಳಿದುಕೊಂಡರು. ಯಾರಿಗೂ ಇವರ ಗುರ್ತು ಮಾತ್ರ ಹತ್ತಲಿಲ್ಲ. ಸಂಜೆಯ ಮುಂದೆ ಮಹಾರಾಜರು ತಮ್ಮ ಮನೆಗೆ

ಹೋಗಿ ತಾಯಿಯ ಕಡೆಯಿಂದ ಭಿಕ್ಷೆ ಹಾಕಿಸಿಕೊಂಡು ಬಂದರು. ತಾಯಿಗೂ ಇವರ ಗುರ್ತ ಹತ್ತಲಿಲ್ಲ. ಹಗಲು ಹೊತ್ತಿನಲ್ಲಿ ಮನೆಗೆ ಹೋಗಿದ್ದರೆ ಆ ಸಾಧ್ವಿಯು ಮಗನ ಗುರ್ತ ಹಿಡಿಯಬಹುದಾಗಿತ್ತು. ಆದರೆ ಕತ್ತಲಲ್ಲಿ ಹೋದ್ದರಿಂದ ಹ್ಯಾಗೆ ಗುರ್ತ ಹತ್ತಬೇಕು? ತಾಯಿಯು ಹಾಕಿದ ಭಿಕ್ಷೆಯ ಮೇಲೆ ಅಂದು ನಿರ್ವಾಹವನ್ನು ಸಾಗಿಸಿ, ಮರುದಿನ ಮಹಾರಾಜರು ಖಾತವಳಕ್ಕೆ ಹೋದರು. ಈ ಗ್ರಾಮವು ಮಹಾರಾಜರ ಹೆಂಡತಿಯ ಊರೆಂಬುದು ನಮ್ಮ ವಾಚಕರ ಸ್ಮರಣೆಯಲ್ಲಿರಬಹುದು. ಮಹಾರಾಜರು ಊರ ಹೊರಗೆ ಒಂದು ಗುಡಿಯಲ್ಲಿಳಿದು ಊರಲ್ಲಿ ಭಿಕ್ಷೆಗೆ ಹೋದರು. ಭಿಕ್ಷೆ ಬೇಡುತ್ತ ಮಾವನ ಮನೆಗೂ ಹೋಗಿ "ಜಯಜಯ ರಘುವೀರ ಸಮರ್ಥ" ಎಂದು ನುಡಿದರು. ಇವರಾರೋ ಯೋಗ್ಯ ಬೈರಾಗಿಗಳೆಂದು ತಿಳಿದು ಮಾವನು ಇವರ ಹತ್ತರ ಬಂದು—ಗೋಸಾವಿಗಳೇ, ನಿಮ್ಮ ಮುಖಲಕ್ಷಣದ ಮೇಲಿಂದ ನೀವು ಯೋಗ್ಯರಿದ್ದಂತೆ ಕಾಣುತ್ತದೆ. ನಿಮಗೆ ಅಪರೋಕ್ಷಜ್ಞಾನವಿದ್ದರೆ ನಮ್ಮ ದುಃಖವನ್ನು ನಿವಾರಿಸಿರಿ. ನನ್ನ ಮಗಳ ಗಂಡನು ದೇಶಾಂತರ ಹೊರಟು ಹೋಗಿ ಬಹಳ ದಿವಸಗಳಾದವು ಇಂಥಲ್ಲಿರುವನೆಂಬ ಸುದ್ದಿಯು ಕೂಡ ಇಲ್ಲ. ಅವನು ತಿರುಗಿ ಬಂದು ಪ್ರಪಂಚ ಮಾಡಬಹುದೇ? ಎಂದು ಪ್ರಶ್ನೆಮಾಡಿದನು. ಆ ಪ್ರಶ್ನವನ್ನು ಕೇಳಿ ಮಹಾರಾಜರು ನಕ್ಕರು. ಮತ್ತು ಮಾವನನ್ನು ಕುರಿತು—ನಿಮ್ಮ ಮಗಳು ರಾಮಧ್ಯಾನಾಸಕ್ತಳಾಗಿ ಪತಿಯ ಚರಣಗಳ ಮಾನಸಪೂಜೆಯನ್ನು ತಪ್ಪದೆ ಮಾಡುತ್ತಲಿದ್ದರೆ ಆಕೆಯ ಗಂಡನು ಸ್ವಲ್ಪ ದಿವಸಗಳಲ್ಲಿಯೇ ಬಂದು ಆಕೆಗೂ ನಿಮಗೂ ಸಮಾಧಾನವನ್ನುಂಟು ಮಾಡುವನು ಎಂದು ನುಡಿದು ಅಲ್ಲಿಂದ ಹೊರಟು ಹೋದರು. ಮಾವನಿಗಾಗಲಿ, ಹೆಂಡತಿಗಾಗಲಿ, ಅತ್ತೆಗಾಗಲಿ ಇವರ ಗುರ್ತ ಹತ್ತಲಿಲ್ಲ. ಬಳಿಕ ಮಹಾರಾಜರು ಡಾಂಬೇವಾಡಿಯೆಂಬಲ್ಲಿಗೆ ಹೋದರು. ಆ ಪೂರಲ್ಲಿ ಅವರ ಅಕ್ಕನ (ಸೋದರಿ ಅಲ್ಲ) ಮನೆಯಿತ್ತು. ಮಹಾರಾಜರು ತಮ್ಮ

ಅಕ್ಕನ ಮನೆಗೆ ಹೋಗಿ "ಭೀಮಾಬಾಯಿ" ಭಿಕ್ಷೆಯನ್ನು ಹಾಕು ಎಂದರು. ತನ್ನ ಹೆಸರುಗೊಂಡು ಕರೆಯುವ ಗೋಸಾವಿಯು ಇವನಾರೆಂದು ಆ ಸ್ತ್ರೀಯು ಚಕಿತಳಾದಳು. ಬಳಿಕ ಅವಳು ಹೊರಗೆ ಬಂದು ಗೋಸಾವಿಗಳೇ ನೀವು ನನ್ನ ಹೆಸರನ್ನು ಹ್ಯಾಗೆ ತಿಳಿದುಕೊಂಡಿರಿ? ಎಂದಳು. ಆಗ ಮಹಾರಾಜರು ನಕ್ಕು—ಅಕ್ಕಾ, ಈಗ ನೀನು ಪ್ರಾಪಂಚಿಕಳಾಗಿರುವೆ ಆದ್ದರಿಂದ ಈ ಭಿಕ್ಷುಕ ತಮ್ಮನನ್ನು ಗುರ್ತಿಸಲಿಕ್ಕಿಲ್ಲ" ಎಂದರು. ಭೀಮಾಬಾಯಿಯು ಸಂತೋಷಪಟ್ಟು ತಮ್ಮನನ್ನು ಒಳಕ್ಕೆ ಕರಕೊಂಡು ಹೋಗಿ—"ಗಣೂ. ಇನ್ನು ಮುಂದಾದರೂ ಮನೆಯನ್ನು ಹಿಡಿದು ಸಂಸಾರ ಮಾಡಪ್ಪಾ! ನಿನ್ನ ಹೆಂಡತಿಯು ಪ್ರಬುದ್ಧಳಾಗಿ ಎಷ್ಟೋ ದಿವಸಗಳಾದವು, ತಾರುಣ್ಯದಲ್ಲಿ ಹೀಗೆ ಮನೆಬಿಟ್ಟು ತಿರುಗುವದು ಹಿತವಲ್ಲ? ಎಂದು ನುಡಿದಳು ಅಕ್ಕನ ಈ ಉಪದೇಶ ಕೇಳಿ ಮಹಾರಾಜರು ಆಕೆಗೆ ಸಮಾಧಾನೋಕ್ತಿಗಳನ್ನು ಹೇಳಿ ಮತ್ತೆ ನುಡಿದರೇನಂದರೆ—"ಅಕ್ಕಾ, ನಾನು ಬಂದ ಸುದ್ದಿಯನ್ನು ಈಗಲೇ ಎಲ್ಲ ಕಡೆಗೂ ಪ್ರಕಟ ಮಾಡಬೇಡ. ರಾಮೇಶ್ವರ ಯಾತ್ರೆಯನ್ನು ಮುಗಿಸಿಕೊಂಡು ತಾಯಿಗೆ ಭೆಟ್ಟಿಯಾಗುವೆನು. ಆ ನಂತರ ಸಂಸಾರ ಮಾಡುವೆನು.

ಈ ಮೇರೆಗೆ ಅಕ್ಕನಿಗೆ ವಚನಕೊಟ್ಟು ಮಹಾರಾಜರು ರಾಮೇಶ್ವರದ ಕಡೆಗೆ ಹೋದರು. ಕೆಲವಿನ ದಕ್ಷಿಣಕಡೆಯ ತೀರ್ಥಯಾತ್ರೆಗಳನ್ನೆಲ್ಲ ಅಡ್ಡಾಡಿ ಬಳಿಕ ಗೋಂದಾವಲಿಗೆ ಬಂದರು. ಈ ಸಾರೆ ಮಾತ್ರ ಅವರು ಗುಡಿಯಲ್ಲಿಳಿಯದೆ ನೆಟ್ಟಗ ಮನೆಗೆ ಹೋದರು. ತಾಯಿಗೆ ಹೋಗಿ ನಮಸ್ಕರಿಸಿದರು. ಆ ಸಾಧ್ವಿಯು ಮಗನನ್ನು ಗುರ್ತಿಸಿ ಕಣ್ಣುತುಂಬ ನೀರುತಂದು ಮುದ್ದಾಡಿದಳು. ತಾಯಿಗೆ ವಿಯೋಗದುಃಖವು ಸಹನವಾಗದೆ ಹೀಗೆ ದುಃಖವಾಯಿತೆಂದು ತಿಳಿದು ಮಹಾರಾಜರು ಆಕೆಗೆ ಸಮಾಧಾನೋಕ್ತಿಗಳನ್ನು ಹೇಳಿ, ತಂದೆಗೆ ನಮಸ್ಕರಿಸಿದರು. ರಾವಜೀಪಂತರು ಮಹಾಭಗವದ್ಭಕ್ತರೂ ಮಗನ ಸಾಮರ್ಥ್ಯವನ್ನು ಬಲ್ಲವರೂ

ಆದ್ದರಿಂದ ಹರುಷ-ವಿಷಾದಗಳಿಗೆ ಒಳಗಾಗಲಿಲ್ಲ. ಅವರು ಮೌನದಿಂದ ಮಗನನ್ನು ಕಣ್ಣುತುಂಬ ನೋಡಿದರು ಮಾತ್ರ.

ಹೀಗೆ ಮಹಾರಾಜರು ತಾಯಿ-ತಂದೆಗಳಿಗೆ ಭೆಟ್ಟಿಯನ್ನು ಕೊಟ್ಟು ಮಾವನ ಮನೆಗೆ ಹೇಳಿಕಳಿಸಿದರು. ಸಂಭಾಜಿರಾಯರಿಗೆ ತುಂಬಾ ಸಂತೋಷವಾಯಿತು. ಅವರು ಒಂದು ಶುಭಮುಹೂರ್ತವನ್ನು ನೋಡಿ ಮಗಳನ್ನು ಅತ್ತೆಯ ಮನೆಗೆ ಕಳುಹಿಸಿಕೊಟ್ಟರು. ಆ ಸಾಧ್ವೀಮಣಿಯು ಪತಿಗೃಹವಾಸ ಸೌಖ್ಯವನ್ನು ಹೊಂದಿದಳು. ಎಲ್ಲ ಕಡೆಗೂ ಆನಂದವೇ ಆನಂದವು. ಗೋಂದಾವಲಿಯ ನಿವಾಸಿಗಳು ಗುಂಪು ಗುಂಪಾಗಿ ಬಂದು ಮಹಾರಾಜರ ದರ್ಶನವನ್ನು ತಕ್ಕೊಂಡು ಹೋಗುತ್ತಿದ್ದರು. ದೇವಾಂಶಸಂಭೂತರಾದ ಮಹಾರಾಜರು ಸದ್ಗುರು ಕೃಪೆಯಿಂದ ಬ್ರಹ್ಮಾನುಭವವನ್ನು ಹೊಂದಿದ ಬಳಿಕ ಅವರ ದೈವೀತೇಜಸ್ಸಿನ ವರ್ಣನೆಯನ್ನು ಮಾಡುವವರಾರು?

ಮಹಾರಾಜರು ಪೂರ್ವ ಜನ್ಮದಲ್ಲಿ ತಾಯಿಗೆ ವಚನಕೊಟ್ಟಂತೆ ಪ್ರಪಂಚಮಾಡತೊಡಗಿದರು. ಮನೆಯೊಳಗಿನ ಎಲ್ಲ ವ್ಯವಹಾರಗಳನ್ನು ದಕ್ಷತೆಯಿಂದ ನೋಡತೊಡಗಿದರು. ಮಗನು ಇಷ್ಟು ವ್ಯವಹಾರಜ್ಞನು ಹ್ಯಾಗಾದನೆಂದು ಗೀತಾಬಾಯಿಯು ಚಕಿತಳಾಗುತ್ತಿದ್ದಳು. ಉತ್ತಮ ಸಾಂಸಾರಿಕನಿಗಿಂತಲೂ ಮಹಾರಾಜರ ದಕ್ಷತೆಯು ಹೆಚ್ಚಾಯಿತು. ಹೊಲ, ಮನೆ, ಕಮತ, ಮೊದಲಾದವುಗಳಲ್ಲಿ ಸ್ವತಃ ಲಕ್ಷಗೊಡುತ್ತಿದ್ದರು. ತಾವು ವತನದಾರ ಕುಲಕರ್ಣಿಯರಾದ್ದರಿಂದ ಕುಲಪರಂಪರಾಗತ ಕುಲಕರ್ಣಿಕೆಯನ್ನು ಸಹ ಬಿಡಲಿಲ್ಲ. ತಾವೇ ಕುಲಕರ್ಣಿಕೆಯ ಚಾರ್ಜನ್ನು ತಕ್ಕೊಂಡು ಕೆಲಸಮಾಡಹತ್ತಿದರು. ಮಹಾರಾಜರ ಲೆಕ್ಕಪತ್ರ ಬರೆಯುವ ಪದ್ಧತಿಯನ್ನೂ ಅವರ ಚಟವಟಿಕೆಯನ್ನೂ ನೋಡಿ ಸರಕಾರೀ ಅಮಲ್ದಾರರು ಬೊಟ್ಟುಕಚ್ಚಿದರು. ಮಹಾರಾಜರು ಕುಲಕರ್ಣಿಕೆಯ ದಪ್ತರನ್ನು ಓಲೇಕಾರರ ಮೇಲೆ ಹೊರಿಸಿಕೊಂಡು ಕಚೇರಿಗೆ ಹೋಗಲು

ಅಮಲ್ದಾರನು ಕುರ್ಚಿಯಿಂದೆದ್ದು ನಮಸ್ಕಾರ ಮಾಡಿ ಅವರನ್ನು ಕುಳ್ಳಿರಿಸಿ ತಾನು ಕೂಡ್ರುತ್ತಿದ್ದನು. ಯಾರಿಗೆ ಸೃಷ್ಟಿ ಸ್ಥಿತಿ-ಲಯಾದಿಗಳ, ಸರ್ವತಂತ್ರ ಸ್ವತಂತ್ರ ಅಧಿಕಾರವಿದೆಯೋ ಅಂಥವರಿಗೆ ಅಂಜದವರಾರು? ಮಹಾರಾಜರ ಅಧಿಕಾರವೆತ್ತ? ಹೊಟ್ಟೆಯ ಪಾಡಿಗಾಗಿ ದುಡಿಯುವ ಅಧಿಕಾರಿಗಳ ಅಧಿಕಾರವೆತ್ತ? ಮಹಾರಾಜರು ಕುಲಕರ್ಣಿ ಕೆಲಸವನ್ನು ಮಾಡಿದರೆ ಅದರಿಂದ ಅವರ ಯೋಗ್ಯತೆಯು ಕಡಿಮೆಯಾಗಬಹುದೇ?

ಮಹಾರಾಜರು ಈ ಮೇರೆಗೆ ಉತ್ತಮ ಸಂಸಾರಿಕರಂತೆ ಸಂಸಾರ ಮಾಡತೊಡಗಿದರು. ಮಗನ ಸಂಸಾರ ನೋಡಬೇಕೆಂದು ಗೀತಾಬಾಯಿಯು ಹಾತೊರೆಯುತ್ತಿದ್ದದರಿಂದ ಆಕೆಯ ಇಚ್ಛಾಪೂರ್ತಿಗಾಗಿಯೇ ಮಹಾರಾಜರು ಹೀಗೆ ಸಂಸಾರ ಮಾಡಿದರೆಂಬದನ್ನು ಬಿಚ್ಚಿ ಹೇಳುವ ಕಾರಣವಿಲ್ಲ. ದೇವರು ಭಕ್ತಾಧೀನನಾದ್ದರಿಂದ ಭಕ್ತರ ಮನೋರಥ ಪರಿಪೂರ್ಣತೆಗಾಗಿ ಏನನ್ನಾದರೂ ಮಾಡಬೇಕಾಗುತ್ತದೆ. ಕೃಷ್ಣಾವತಾರದಲ್ಲಿ ಭಕ್ತರ ಇಚ್ಛಾಪೂರ್ಣಾರ್ಥವಾಗಿಯೇ ರಾಸಕ್ರೀಡಾದಿಗಳನ್ನು ಮಾಡಬೇಕಾಯಿತು. ರಾಮಾವತಾರದಲ್ಲಿ ಭಕ್ತರ ಇಚ್ಛಾಪೂರ್ಣತೆಗಾಗಿಯೇ ವಾನರ ಬಲವನ್ನು ಕೂಡಿಸಿ ರಾವಣಾದಿಕರೊಡನೆ ಯುದ್ಧವನ್ನು ಹೂಡಬೇಕಾಯಿತು. ದೇವರಿಗೆ ಅದೊಂದು ಲೀಲೆಯೇ ಆಗಿರುವದು. ಅದರಂತೆ ಪ್ರಸ್ತುತದ ಚರಿತ್ರನಾಯಕರು ಬ್ರಹ್ಮಾನಂದ ಮಗ್ನರಾದರೂ ಭಕ್ತರ ಸಲುವಾಗಿ ವಿಷಯ ಸೇವನೆಯನ್ನು ಮಾಡಬೇಕಾಯಿತು. ಆದರೆ ಸಜ್ಜನರ ಸಂಸಾರಕ್ಕೂ ಪಾಮರರ ಸಂಸಾರಕ್ಕೂ ಭೂಮ್ಯಾಕಾಶದಷ್ಟು ಅಂತರವಿರುತ್ತದೆಂಬದನ್ನು ಯಾರೂ ಮರೆಯಬಾರದು. ಸಜ್ಜನರು ನಿರೀಚ್ಛರು. ಯಾವದೊಂದು ಕೆಲಸವು ಹೀಗೆಯೇ ಆಗಬೇಕೆಂಬ ಸಂಕಲ್ಪವು ಅವರಿಗಿರುವದಿಲ್ಲ. ಅದಕ್ಕಾಗಿ ಅವರು ಮನಃಕ್ಲೇಶವನ್ನು ತಾಳುವದಿಲ್ಲ. ಆದರೆ ಇದಕ್ಕೆ ವಿರುದ್ಧವಾಗಿ ವಿಷಯಾಂಧರಾದ ನಮ್ಮಂಥವರ ಸ್ಥಿತಿಯಿರುತ್ತದೆ. ಜ್ಞಾನಿಗಳು ಜ್ಞಾನಜ್ಯೋತಿಯಲ್ಲಿ ನ್ಹಾವುಳಿಸುವರು. ನಾವು ಅಂಥಂತನು

ಸ್ಸಿನಲ್ಲಿ ವ್ಯವಹರಿಸುವವರು, ಬೆಳಕಿನಲ್ಲಿ ನಡೆಯುವವನಿಗೂ ಕತ್ತಲೆಯಲ್ಲಿ ನಡೆಯುವವನಿಗೂ ಏನು ವ್ಯತ್ಯಾಸವೆಂದು ಕೇಳಿದರೆ ಕೇಳಿದವರ ಮೂರ್ಖತನಕ್ಕೇ ಜನರು ನಗುವರಲ್ಲವೇ? ಮನುಷ್ಯನು ಜ್ಞಾನಿಯಾಗಿಯೇ ಸಂಸಾರದಲ್ಲಿ ಬಿದ್ದರೆ ಯಾವ ಬಗೆಯ ಶೋಕಾರಣ್ಯದಲ್ಲಿ ಪ್ರವೇಶ ಮಾಡಲಾರನೆಂಬದನ್ನರಿತೇ ಗುರುಕುಲದ ನಂತರ ಪ್ರಾಪಂಚಿಕನಾಗುವ ಪದ್ಧತಿಯು ನಮ್ಮಲ್ಲಿದ್ದಿತು. ಆದರೆ ಅದೆಲ್ಲ ಈಗ ಕನಸಿನಂತಾಗಿದೆ ಜ್ಞಾನಿಗಳ ಸಂಸಾರವನ್ನು ನೋಡಿದರೆ ಈ ಮಾತಿನ ಸತ್ಯತೆಯು ಕಂಡುಬರುತ್ತದೆ.

ಈ ಪ್ರಕಾರ ಮಹಾರಾಜರು ಸಂಸಾರವನ್ನು ನಡಿಸಿರಲು ಅವರ ಸಾಧ್ವಿಯಾದ ಪತ್ನಿಯು ಒಳ್ಳೇ ಉಲ್ಲಾಸದಿಂದ ಗೃಹಕಾರ್ಯಗಳನ್ನು ಮಾಡುತ್ತಿದ್ದಳು. ಇಂಥ ಮಹಾತ್ಮರ ಪಾಣಿಗ್ರಹಣ ಮಾಡಿದ ಆ ಸಾಧ್ವಿಯ ಪುಣ್ಯವನ್ನು ಬಣ್ಣಿಸುವದೇನು? ಆ ಸತಿಯು ತ್ರೈಲೋಕ್ಯ ವಂದ್ಯಳೇ ಸರಿ. ಆಕೆಯು ಪತಿಸೇವೆಯಲ್ಲಿ ಅತ್ಯಂತ ತತ್ಪರಳಿದ್ದಳು. ಮನೆಗೆ ಬಂದ ಭಕ್ತರನ್ನು ಅನ್ನದಾನದಿಂದ ತೃಪ್ತಿಬಡಿಸುತ್ತಿದ್ದಳು. ಲಿಂಗೋಪಂತರ ಕಾಲದಿಂದ ನಡೆಯುತ್ತ ಬಂದ ಅನ್ನದಾನವು ಈ ಮಹಾರಾಜರ ಕಾಲಕಿರ್ದಿಯಲ್ಲಿ ಎಷ್ಟೋ ಪಟ್ಟು ಬೆಳೆಯಿತು. ಅನ್ನದಾನವು ಅವಿಚ್ಛಿನ್ನವಾಗಿ ನಡೆಯ ತೊಡಗಿತು. ಮನೆತನದ ಎಲ್ಲ ಕೆಲಸಗಳನ್ನು ಮಹಾಸಾಧ್ವಿಯಾದ ಸರಸ್ವತೀಮಾತೆಯು ಮಾಡುತ್ತಿದ್ದಳು. ಸೊಸೆಯ ಈ ಚಟವಟಿಕೆಯನ್ನು ನೋಡಿ ಗೀತಾಬಾಯಿಯು ಆನಂದಪಡುತ್ತಿದ್ದಳು. ಈ ಪ್ರಕಾರ ಮಹಾರಾಜರು ಪ್ರಪಂಚ ಮಾಡುತ್ತಿರಲು ಅವರು ಪ್ರಪಂಚದಲ್ಲಿದ್ದರೂ ಪಾರಮಾರ್ಥವನ್ನು ಹ್ಯಾಗೆ ಸಾಧಿಸುತ್ತಿದ್ದರೆಂಬದನ್ನು ತೋರಿಸುವದಕ್ಕೋಸ್ಕರ ಅವರ ದಿನಚರ್ಯೆಯನ್ನು ನಮ್ಮ ವಾಚಕರಿಗಾಗಿ ಇಲ್ಲಿ ಕೊಡುವೆವು.

ಮಹಾರಾಜರು ಪ್ರತಿನಿತ್ಯ ಬ್ರಾಹ್ಮ್ಯಮುಹೂರ್ತದಲ್ಲೆದ್ದು, ರಾಮಧ್ಯಾನ ಮಾಡಿ ಪ್ರಾತರ್ವಿಧಿಗಳನ್ನು ತೀರಿಸುತ್ತಿದ್ದರು. ಬಳಿಕ ಸ್ನಾನ

ಮಾಡಿ ಸಂಧ್ಯಾವಂದನೆಯನ್ನು ತೀರಿಸಿಕೊಂಡು ಶ್ರೀರಾಮಪಂಚಾಯತನದ ಪೂಜೆಯನ್ನು ಮಾಡುತ್ತಿದ್ದರು. ಶ್ರೀರಾಮನಿಗೆ ಷೋಡಶೋಪಚಾರ ಪೂಜೆಯನ್ನು ಸಮರ್ಪಿಸಿ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡುತ್ತಿದ್ದರು. ಬಳಿಕ ಮನೆಯ ಮುಂದಿನ ಪಡಸಾಲೆಯಲ್ಲಿ ಕುಳಿತು ಮನೆಗೆ ಬಂದ ಭಕ್ತರಿಗೆ ಅಧ್ಯಾತ್ಮರಾಮಾಯಣ, ತುಳಸೀರಾಮಾಯಣ, ಶ್ರೀದಾಸಬೋಧ ಗ್ರಂಥಗಳೊಳಗಿನ ವಿಷಯವನ್ನು ಭಕ್ತಿಯು ಉಕ್ಕೇರುವಂತೆ ತಿಳಿಸಿ ಹೇಳುತ್ತಿದ್ದರು. ದೂರ ದೂರಿನ ಜನರು ಅವರ ಮಹಾತ್ಮ್ಯೆಯನ್ನು ಕೇಳಿ ಬರತೊಡಗಿದರು. ಮಧ್ಯಾಹ್ನದ ವರೆಗೆ ನಿರೂಪಣವು ನಡೆದ ಬಳಿಕ ಮಧ್ಯಾಹ್ನ ಸಂಧ್ಯಾವಂದನೆಯನ್ನು ಮಾಡಿ ಅತಿಥಿಗಳೊಡನೆ ಊಟ ಮಾಡುತ್ತಿದ್ದರು. ಊಟವಾದ ಬಳಿಕ ಗ್ರಾಮದ ಲೆಕ್ಕ-ಪತ್ರಗಳನ್ನು ನೋಡಿ ಮನೆತನದ ಎಲ್ಲ ವ್ಯವಹಾರವನ್ನು ನಿರೀಕ್ಷಿಸುತ್ತಿದ್ದರು. ಅನಂತರ ಹಿತ್ತಲ-ಮುಂಚಿ ಮೊದಲಾದ ಸ್ಥಳಗಳನ್ನೆಲ್ಲ ಅಡ್ಡಾಡಿ ದನಕರುಗಳನ್ನು ನೋಡುತ್ತಿದ್ದರು. ಒಮ್ಮೊಮ್ಮೆ ಹೊಲಕ್ಕೆ ಹೋಗಿ ಅಲ್ಲಿ ಏನು ಕೆಲಸ ನಡದಿದೆ ಎಂಬದನ್ನು ನೋಡುತ್ತಿದ್ದರು. ಬಳಿಕ ಸಂಜೆಗೆ ಮನೆಗೆ ಬಂದು ಶ್ರೀರಾಮ ಭಜನೆಯನ್ನು ಮಾಡುತ್ತಿದ್ದರು. ಅವರ ರಸಾಳ ಭಜನೆಯನ್ನು ಕೇಳಿ ಶ್ರೋತೃಸಮುದಾಯವು ಆನಂದದಿಂದ ಪರವಶವಾಗುತ್ತಿತ್ತು. ಬಳಿಕ ಅವರು ೧೧ ಗಂಟೆಯ ರಾತ್ರಿಗೆ ಭಜನೆಯನ್ನು ಮುಗಿಸಿ ಊಟ ಮಾಡುತ್ತಿದ್ದರು. ಬಳಿಕ ಗೋಶಾಲೆ ಮೊದಲಾದವುಗಳನ್ನು ನೋಡಿ ಆಕಳುಗಳ ಮೇಲೆ ಕೈಯಾಡಿಸಿ ಶಯನಮಂದಿರವನ್ನು ಪ್ರವೇಶಿಸುತ್ತಿದ್ದರು. ಮಹಾರಾಜರು ಸಂಸಾರದಲ್ಲಿರುವವರೆಗೆ ಈ ನಿತ್ಯಕ್ರಮವನ್ನು ಬಿಡಲಿಲ್ಲ.

ಮಹಾರಾಜರು ಬ್ರಹ್ಮಾನಂದ ಮಗ್ನರಾಗಿದ್ದರೂ ಸಂಸಾರದಲ್ಲಿ ಯಾಕೆ ಬಂದರೆಂದು ಎಷ್ಟೋ ಜನರು ಸಂಶಯಗ್ರಸ್ತರಾಗಬಹುದು. ವಿಚಾರ ಮಾಡಿದರೆ ಹೀಗೆ ಸಂಶಯಕ್ಕೆ ಆಸ್ಪದವುಳಿಯುವದಿಲ್ಲ. ಸಂಸಾರ

ವೆಂಬದು ಮಹಾಭೂತವಲ್ಲ. ಅನ್ಯಾಯದ ಕೆಲಸವಲ್ಲ. ಆದರೆ ಅದರಲ್ಲಿ ಪ್ರವೇಶ ಮಾಡಬೇಕಾದರೆ ಮನುಷ್ಯನು ಯಾವ ಬಗೆಯ ವಿದ್ಯೆಯನ್ನು ಸಂಪಾದಿಸಬೇಕೆಂಬದು ಮಾತ್ರ ಸಕಲರೂ ತಿಳಿಯತಕ್ಕ ವಿಷಯವಾಗಿದೆ. ಯಾವನು ಸದ್ಗುರುಸೇವೆಯನ್ನು ಮಾಡಿ ಬ್ರಹ್ಮಜ್ಞಾನಿಯಾಗಿರುವನೋ ಅವನಿಗೆ ಸಂಸಾರವು ಬಾಧಕವಾಗದು. ಆತನು ಸಂಸಾರಸಾಗರದಲ್ಲಿ ಬಂದೂ ಮುಳುಗನು. ದೇಹಭೋಗಕ್ಕೆ ಸರಿಯಾಗಿ ಬರುವ ಫಲಗಳನ್ನು ಅನುಭವಿಸುತ್ತ ಅತನು ಆನಂದದಿಂದ ಕಾಲ ಕಳೆಯುವನು. ಯಾವನು ಬ್ರಹ್ಮಜ್ಞಾನಿಯೋ ಅವನೇ ನಿಜವಾದ ಸಂಸಾರಿಕನು. ಬ್ರಹ್ಮಜ್ಞಾನವಿಲ್ಲದ ವನು ಸಂಸಾರಿಕನಲ್ಲ; ಅವನು ಕೇವಲ ವಿಷಯಲಂಪಟನು; ಯಾವ ವಸ್ತು ಗಳಲ್ಲಿಯೂ ನಿಜವಾದ ಪ್ರೇಮವು ಅವನಲ್ಲಿರಲಾರದು. ಈ ದೃಷ್ಟಿಯಿಂದ ವಿಚಾರ ಮಾಡಿದರೆ ಮಹಾರಾಜರು ಪ್ರಪಂಚ ಮಾಡಿದ್ದು ವಿಹಿತವೆಂದು ಯಾರಿಗಾದರೂ ತೋರದೆ ಇರದು. ಅವರು ಅಗ್ನಿಸಾಕ್ಷಿಯಾಗಿ ಪತ್ನಿಯ ಪಾಣಿಗ್ರಹಣ ಮಾಡಿದ್ದರಿಂದ ಧರ್ಮ, ಅರ್ಥ, ಕಾಮ, ಮೋಕ್ಷ ಮೊದ ಲಾದ ಚತುರ್ವಿಧ ಪುರುಷಾರ್ಥಗಳುಂಟಾಗುವಂತೆ ಆಕೆಯನ್ನು ಸಂರಕ್ಷಿ ಸುವದು ಅವರ ಕರ್ತವ್ಯವಾಗಿತ್ತು. ಎಷ್ಟೋ ಜನರು ತಾವು ಪರಮಾ ರ್ಥಿಗಳೆಂದು ಜಂಭ ಬಡಿಯುತ್ತ ಮಾಡಿಕೊಂಡ ಹೆಂಡತಿಯನ್ನು ಬಿಟ್ಟು ತಿರುಗುವರು. ಇದೆಂಥ ಪಾರಮಾರ್ಥವೋ ತಿಳಿಯದು. ಇಂಥವರು ಪಾರಮಾರ್ಥವನ್ನು ಸಾಧಿಸದೆ ಪತ್ನೀದ್ರೋಹಿಗಳಾಗಿ ಚಿರಕಾಲ ನರಕ ಭೋಗಿಸುವರೆಂದುಮಾತ್ರ ತಿಳಿಯಬೇಕು. ಮಹಾರಾಜರು ಇಂಥ ಅಜ್ಞಾ ನಕೋಟಿ ಜನರಿಗೆ ಉಪದೇಶವಾಗಲೆಂದು ಮದುವೆ ಮಾಡಿಕೊಂಡ ಹೆಂಡ ತಿಯನ್ನು ಉತ್ತಮವಾಗಿ ಸಂರಕ್ಷಿಸಿದರು. ಆಕೆಗೆ ಜ್ಞಾನೋಪದೇಶ ಮಾಡಿ ಬ್ರಹ್ಮಾನುಭವ ಸ್ಥಿತಿಯನ್ನು ತಂದು ಕೊಟ್ಟರು. ಯಾವ ಪತಿಯು ಸತಿಯನ್ನು ಉದ್ಧಾರ ಮಾಡುವನೋ ಆ ಸತಿಯಲ್ಲಿ ಪವಿತ್ರಭಾ ವನೆ, ಸದಾಚಾರ, ಸದ್ಭಕ್ತಿಗಳನ್ನು ಹುಟ್ಟಿಸುವನೋ ಅವನಿಗೇ ನಿಜವಾದ

ಪತಿಯನ್ನಬೇಕು. ಇಂಥ ಪತಿ-ಪತ್ನೀಭಾವವನ್ನು ಮಹಾರಾಜರು ಜಗತ್ತಿಗೆ ತಮ್ಮ ಆಚರಣೆಯಿಂದ ತೋರಿಸಿ ಕೊಟ್ಟರು.

ಮಹಾರಾಜರು ಜನರಿಗೆ ಧರ್ಮವನ್ನು ಕಲಿಸುವದಕ್ಕಾಗಿಯೂ, ಗುರ್ವಾಜ್ಞೆಯನ್ನು ಪಾಲಿಸುವದಕ್ಕಾಗಿಯೂ, ತಾಯಿಯ ವಚನವನ್ನು ಪಾಲಿಸುವದಕ್ಕಾಗಿಯೂ ಪ್ರಪಂಚವನ್ನು ಮಾಡಿ ಅದರಲ್ಲಿ ಯಶಸ್ವೀಗಳಾದರು. ಕಡೆತನಕ ಆ ಸಂಸಾರದಲ್ಲಿಯೇ ಇರಬೇಕೆಂಬ ಇಷ್ಟವು ಅವರಿಗಿರಲಿಲ್ಲ. ಜನರನ್ನು ರಾಮಭಕ್ತಿಗೆ ಹಚ್ಚಿ ಸದ್ಭಕ್ತರನ್ನು ಉದ್ಧರಿಸುವದು ಅವರ ಅವತಾರದ ಮುಖ್ಯ ಕರ್ತವ್ಯವಾಗಿತ್ತು. ಆದ್ದರಿಂದ ಅವರು ಪ್ರಪಂಚವನ್ನು ತ್ಯಜಿಸಿ, ದೇಶಾಟನ ಮಾಡುವದು ಅವಶ್ಯವಾಯಿತು. ಇನ್ನು ಮುಂದೆ ಅವರು ತಮ್ಮ ಈ ಕರ್ತವ್ಯ ಕ್ಷೇತ್ರದಲ್ಲಿ ಕಾಲಿಡಬೇಕಾದ್ದರಿಂದ, ಒಮ್ಮೆ ಗುರುದರ್ಶನ ಹೊಂದಬೇಕೆಂದು ಇಚ್ಛಿಸಿದರು. ತಮ್ಮ ಈ ಇಚ್ಛೆಯನ್ನು ಹೆಂಡತಿಗೆ ತಿಳಿಸಿದರು. ಆ ಸಾಧ್ವಿಯು ಅತ್ಯಂತ ಆನಂದದಿಂದ ಪತಿಗೆ ಸಮ್ಮತಿಯನ್ನಿತ್ತು, ತನ್ನನ್ನೂ ಸಂಗಡ ಕರೆದು ಕೊಂಡು ಹೋಗುವಂತೆ ಬಿನ್ನವಿಸಿದಳು. ಆಗ ಮಹಾರಾಜರು ಪತ್ನಿಯು ಧನ್ಯವಾದವನ್ನು ಮಾಡಿ, ಕುಲಕರ್ಣಿಯ ಕೆಲಸವನ್ನು ಬೇರೆ ಜನರಿಗೆ ಕೊಟ್ಟರು. ಮತ್ತು ಮನೆಯಲ್ಲಿ ಮುಪ್ಪಿನ ತಾಯಿ-ತಂದೆಗಳನ್ನು ಜೋಪಾನ ಮಾಡುವದಕ್ಕೂ, ಮನೆತನವನ್ನು ನಡಿಸಿಕೊಂಡು ಹೋಗುವದಕ್ಕೂ ವಿಶ್ವಾಸಕ್ಕೆ ಪಾತ್ರನಾದ ಒಬ್ಬ ಗುಮಾಸ್ತನನ್ನು ಇಟ್ಟು, ಪ್ರಾಪಂಚಿಕ ಉಪಾಧಿಗಳನ್ನೆಲ್ಲ ಉಪಸಂಹರಿಸಿಕೊಂಡರು. ಅವರ ಈ ಕೃತಿಯು ರಹಸ್ಯವು ಸರಸ್ವತೀಬಾಯಿಯ ಹೊರತು ಅನ್ಯರಾರಿಗೂ ತಿಳಿಯಲಿಲ್ಲ. ಹೀಗೆ ಮಹಾರಾಜರು ಸರ್ವ ಉಪಾಧಿಗಳನ್ನು ತ್ಯಜಿಸಿ, ಗುರುದರ್ಶನಕ್ಕೆ ಹೋಗುವ ಸಮಯವನ್ನು ಕಾಯತೊಡಗಿದರು.

---

## ೯ನೆಯ ಅಧ್ಯಾಯ:—ಜ್ಞಾನೋಪದೇಶ.

ಒಂದು ದಿನ ಮಧ್ಯರಾತ್ರಿಯ ಸಮಯದಲ್ಲಿ ಬ್ರಹ್ಮಚೈತನ್ಯರು ಪತ್ನೀ ಸಮೇತರಾಗಿ ಗುರುದರ್ಶನಕ್ಕೋಸ್ಕರ ನೈಮಿಷಾರಣ್ಯಕ್ಕೆ ಹೊರಟರು. ತುಕಾರಾಮ ಸಾಧುಗಳು ಆಗ ನೈಮಿಷಾರಣ್ಯದಲ್ಲಿರುತ್ತಿದ್ದರು. ಮನೆಯಲ್ಲಿತಂದೆ-ತಾಯಿಗಳಿಗೆ ಈ ಸುದ್ದಿಯು ತಿಳಿದರೆ ಅವರು ಹೋಗಗೊಡರೆಂದು ಮಹಾರಾಜರು ಹೀಗೆ ರಾತ್ರಿಯಲ್ಲಿ ಮನೆಬಿಡಬೇಕಾಯಿತು. ಅವರು ಪಯಣದಮೇಲೆ ಪಯಣ ಮಾಡುತ್ತ ಗುರುಸ್ಥಾನವನ್ನು ಮುಟ್ಟಿದರು, ಮಹಾರಾಜರು ಪತ್ನೀಸಮೇತವಾಗಿ ಗುರುಗಳನ್ನು ಕಂಡು ದಂಡವತ್ ನಮಸ್ಕಾರ ಮಾಡಿದರು. ಈ ದಂಪತಿಗಳನ್ನು ನೋಡಿ ಗುರುಗಳು ತುಂಬಾ ಸಂತೋಷಬಟ್ಟು ನುಡಿದರೇನಂದರೆ—"ಬ್ರಹ್ಮಚೈತನ್ಯಾ, ಸೀತಾಮಾತೆಯೊಡನೆ ಒಪ್ಪುವ ಶ್ರೀರಾಮನಂತೆ ನೀನು ಹೆಂಡತಿಯಿಂದ ಯುಕ್ತನಾಗಿ ಒಪ್ಪುತ್ತೀ, ಮಾಯಾ ಸಹಿತನಾದ ಪರಬ್ರಹ್ಮನಂತೆ ತೋರುತ್ತೀ; ಬಾ, ಇತ್ತ ಕೂಡ್ರು, ತಂಗೀ ಸರಸ್ವತೀ, ಇತ್ತ ಕುಳಿತುಕೋ, ನಿನ್ನ ವಿನಯಶಾಲಿತ್ವವನ್ನು ನೋಡಿ ಬಹಳ ಸಂತೋಷವಾಗುತ್ತದೆ. ಈ ಕಾಲಕ್ಕೆ ನಿನ್ನ ಅಪೇಕ್ಷೆಯೇನಿರುವದೆಂಬದನ್ನು ಹೇಳು ದುರ್ಲಭವಿದ್ದರೂ ಕೊಡುವೆನು."

ಈಮೇರೆಗೆ ತುಕಾರಾಮ ಸಾಧುಗಳು ಮಾತನಾಡಲು, ಸರಸ್ವತೀಬಾಯಿಯು ತುಂಬಾಹರ್ಷಚಿತ್ತಳಾಗಿ ನುಡಿದಳೇನಂದರೆ—"ಮಹಾರಾಜ, ನನಗೆ ತಮ್ಮ ಅನುಗ್ರಹದಿಂದ ಏನೂ ಅಪೇಕ್ಷೆಯಿರುವದಿಲ್ಲ; ಆದರೆ ಇದುವರೆಗೆ ಸಂತತಿಯಿಲ್ಲದ್ದರಿಂದ ನಾನು ಬಂಜೆಯೆಂದು ಜನನಿಂದೆಗೆ ಗುರಿಯಾಗಬೇಕಾಗುತ್ತದೆ. ಸ್ತ್ರೀಯರಿಗೆ ಸಂತತಿಯಾದರೆ, ಜನ್ಮವು ಸಫಲವಾಗುತ್ತದೆ. ವೃಕ್ಷಗಳಿಗೆ ಫಲಗಳು ಹ್ಯಾಗೆ ಭೂಷಣಭೂತವೋ ಹಾಗೆ ಸ್ತ್ರೀ

ತನುಲತೆಗೆ ಫಲವು ಭೂಷಣವಾಗಿರುತ್ತದೆ. ಆದ್ದರಿಂದ ಪತಿಯಂಥ ತೇಜಸ್ವಿಯಾದ ಪುತ್ರನನ್ನು ದಯಪಾಲಿಸಬೇಕು.''

ಈ ಮೇರೆಗೆ ಸರಸ್ವತೀಬಾಯಿಯು ಬೇಡಿಕೊಳ್ಳಲು, ತುಕಾರಾಮ ಸಾಧುಗಳೂ ಬ್ರಹ್ಮಚೈತನ್ಯರೂ ನಕ್ಕರು. ಈಕೆಗೆ ಇನ್ನೂ ಮೋಹವು ಬಿಟ್ಟಿಲ್ಲ. ಆದ್ದರಿಂದ ಹೀಗೆ ಇಚ್ಛಿಸುವಳು, ಎಂದು ಅಂದರು. ಬಳಿಕ ತುಕಾರಾಮ ಸಾಧುಗಳು— ತಥಾಸ್ತು ಎಂದು ಆಕೆಗೆ ಅಭಯವನ್ನು ಕೊಟ್ಟರು. ಉದರದಲ್ಲಿ ಸುಪುತ್ರನು ಜನಿಸುವನೆಂದು ಆ ಸಾಧ್ವಿಯು ಸಂತೋಷಭರಿತಳಾದಳು. ಮುಂದೆ ಬ್ರಹ್ಮಚೈತನ್ಯರು ನಾಲ್ಕಾರು ದಿನ ಗುರು ಸನ್ನಿಧಿಯಲ್ಲಿದ್ದು, ಅಪ್ಪಣೆ ಪಡೆದು ಹೆಂಡತಿಯೊಡನೆ ನಾಶಿಕ ಕ್ಷೇತ್ರಕ್ಕೆ ಬಂದರು. ಆ ಕ್ಷೇತ್ರದಲ್ಲಿರುವಾಗ ಅವರು ಹೆಂಡತಿಯನ್ನು ಕುರಿತು ನುಡಿದರೇನೆಂದರೆ—

''ಯಾವ ಮಹಾತ್ಮನು ಚತುರ್ವಿಧ ಮುಕ್ತಿಗಳನ್ನು ಕೊಡಲಿಕ್ಕೆ ಸಮರ್ಥನೋ, ಮತ್ತು ಯಾವಾತನ ಸತ್ತೆಯು ತ್ರಿಲೋಕಗಳಲ್ಲಿ ನಡೆಯುವದೋ ಅಂಥ ಸದ್ಗುರುವಿನ ಬಳಿಯಲ್ಲಿ ನೀನು ಏನು ಬೇಡಿಕೊಂಡಂತಾಯಿತು! ರಾಜನು ಪ್ರಸನ್ನನಾದಾಗ ಹಳೇವಸ್ತ್ರವನ್ನು ಬೇಡಿಕೊಂಡ ಅಭಾಗ್ಯನಂತೆಯೂ, ಕಲ್ಪವೃಕ್ಷದ ಬಳಿಯಲ್ಲಿ ಅಂಬಲಿಯನ್ನು ಬೇಡಿದ ದಡ್ಡನಂತೆಯೂ ನಿನ್ನ ಅವಸ್ಥೆಯಾಯಿತು. ನೀನು ಇದುವರೆಗೆ ಲಕ್ಷಾಂತರ ಜನ್ಮಗಳನ್ನು ತಾಳಿರುತ್ತೀ; ಪ್ರತಿಯೊಂದು ಜನ್ಮದಲ್ಲಿಯೂ ಮಕ್ಕಳನ್ನು ಹಡೆದಿರುತ್ತೀ; ಎಷ್ಟು ಜನ ಮಕ್ಕಳ ತಾಯಿಯು ನೀನಾಗಿರುವೆಯೋ ತಿಳಿಯದು. ಹೀಗಿದ್ದರೂ ಈ ಜನ್ಮದಲ್ಲಿ ಮೋಕ್ಷದಾತೃವಾದ ಸದ್ಗುರುವಿನ ಬಳಿಯಲ್ಲಿ ಮತ್ತೆ ಮಕ್ಕಳನ್ನೇ ಬೇಡಿಕೊಂಡೆಯಲ್ಲ? ಈ ಮನುಷ್ಯಜನ್ಮದ ಸ್ಥಿರತೆಯು ಎಷ್ಟರ ಮಟ್ಟಿಗೆ ಎಂಬದು ನಿನಗೆ ಗೊತ್ತಿದ್ದರೂ ಇಂಥ ವ್ಯಾಮೋಹಕ್ಕೆ ಸಿಲ್ಕಿ ಬಿದ್ದಿಯಲ್ಲ! ಇದು ನಿನ್ನ ದಡ್ಡತನವಲ್ಲವೇ? ಈ ಸಂಸಾರವೂ ಈ ಜನ್ಮವೂ ಅಸ್ಥಿರವು. ಇವನ್ನು ನಂಬಬಾರದು.

ಮನುಷ್ಯಜನ್ಮದಲ್ಲಿ ದೇಹಸಾರ್ಥಕವಾಗುವಂತಹ ಉಪಾಯವನ್ನು ಮಾಡ ಬೇಕಲ್ಲದೆ ಮತ್ತಿಷ್ಟು ಮೋಹದಲ್ಲಿ ಸಿಗುವಂಥ ಸಂಗತಿಗಳ ಕಡೆಗೆ ಲಕ್ಷ್ಯ ಕೊಡಬಾರದು. ವಿಷಯ ಉಪಾಧಿಯು ಮನುಷ್ಯನಿಗೆ ಬಾಧಕವಿರುವದು. ಬುದ್ಧಿವಂತರು ವಿಷಯಗಳನ್ನು ಮನಸಾ ತಿರಸ್ಕರಿಸುವರು. ಆದರೆ ಮೂರ್ಖರು ಮಾತ್ರ ಬಾಯಿ ಚಪ್ಪರಿಸುತ್ತ ವಿಷಯಸುಖವನ್ನು ಭೋಗಿಸ ಹೋಗುವರು. ಅದು ಸುಖವೋ ಅಲ್ಲದ್ದರಿಂದ ಸುಖವು ಹ್ಯಾಗೆ ಆಗಬೇಕು? ನೀರೆಂಬ ಭ್ರಾಂತಿಯಿಂದ ಮೃಗಜಲವನ್ನು ಕುಡಿಯ ಹೋದರೆ ಆ ನೀರು ಕೈಯಲ್ಲಿಯೂ ಬರುವದಿಲ್ಲ ಬಾಯಲ್ಲಿಯೂ ಬೀಳುವದಿಲ್ಲ. ಆದರಂತೆ ವಿಷಯ ಸುಖದ ಅವಸ್ಥೆಯಿರುತ್ತದೆ. ಅದು ಸುಖದ ಭಾಸಮಾತ್ರ. ವಸ್ತುಸ್ಥಿತಿಯು ಹೀಗಿದ್ದು ನೀನು ಜನ್ಮಸಾರ್ಥಕದ ಉಪಾಯವನ್ನು ಬೇಡಿಕೊಳ್ಳದೆ ಪುತ್ರ ನನ್ನು ಬೇಡಿಕೊಂಡೆ? ಆ ಪುತ್ರನು ಅಲ್ಪಾಯುಷಿಯು, ನೀನು ಯಾವ ಲಾಭವನ್ನು ಹೊಂದಿದಂತಾಯಿತು? ಗುರ್ವನುಗ್ರಹದ ಸಮಯವನ್ನು ವ್ಯರ್ಥವಾಗಿ ಕಳೆದುಕೊಂಡೆ.

ಈ ಮೇರೆಗೆ ಮಹಾರಾಜರು ಜ್ಞಾನಬೋಧವನ್ನು ಮಾಡಲು ಆ ಸಾಧ್ವಿಗೆ ತಾನು ಹೀಗೆ ಗುರುಗಳನ್ನು ಬೇಡಿಕೊಂಡದ್ದು ತಪ್ಪಾಯಿ ತೆಂಬದು ತಿಳಿದು ಬಂದಿತು. ಆಗ ಆಕೆಯು ಪಶ್ಚಾತ್ತಾಪಯುಕ್ತಳಾಗಿ ಮಹಾರಾಜ. ನನ್ನಿಂದ ಇದೊಂದು ಪ್ರಮಾದವಾಯಿತು. ನಾನು ಮೋಹಕ್ಕೆ ಬಿದ್ದು ಹೀಗೆ ಬೇಡಿಕೊಂಡೆನು. ಆದರೆ ನನಗೆ ಈಗ ಪಶ್ಚಾತ್ತಾಪವಾಗಿದೆ. ಜನ್ಮಸಾರ್ಥಕ್ಯದ ಉಪಾಯವನ್ನು ಹೇಳಿರಿ. ಎಂದು ನುಡಿದಳು. ಮಹಾರಾಜರು ನಕ್ಕು—ಗುರುವಚನವು ಸುಳ್ಳಾಗದು. ನಿನ್ನ ಇಚ್ಛೆಯಂತೆ ನಿನಗೆ ಸಂತತಿಯಾಗುವದು. ಆದರೆ ಆ ಸಂತತಿಯ ಬಗ್ಗೆ ಮೋಹಗ್ರಸ್ತಳಾಗಬೇಡ. ನಿನಗೆ ಜನ್ಮಸಾರ್ಥಕ್ಯದ ಉಪಾಯ ವನ್ನು ಹೇಳುತ್ತೇನೆ ಕೇಳು.

"ಮುಖ್ಯಸಾಧನವೆಂದರೆ ರಾಮಭಕ್ತಿಯು; ರಾಮಭಜನೆಯಿಂದ ಇದುವರೆಗೆ ಅಸಂಖ್ಯ ಜನರು ಉದ್ಧೃತರಾಗಿ ಹೋಗಿರುವರು. ಅಖಂಡವಾಗಿ ಶ್ರೀರಾಮನನ್ನು ಸ್ಮರಿಸುತ್ತಿರಬೇಕು. ಜಗತ್ತೆಲ್ಲ ರಾಮರೂಪವೆಂದು ಭಾವಿಸಬೇಕು. ರಾಮನ ಹೊರತು ಜಗತ್ತಿನಲ್ಲಿ ಬೇರೆ ಏನೂ ಇಲ್ಲವೆಂದು ತಿಳಿಯಬೇಕು. ದೇಹಸುಖ-ದುಃಖಗಳನ್ನು ಲಕ್ಷಿಸಬಾರದು. ದೇಹವು ಅಸ್ಥಿರವೆಂದು ಅದರ ರಕ್ಷಣಾರ್ಥ ವಿಶೇಷ ಚಿಂತೆಯನ್ನು ವಹಿಸಬಾರದು. ತೀರ ದುರ್ಲಕ್ಷವನ್ನೂ ಮಾಡಬಾರದು. ಪಾರಮಾರ್ಥ ಸಾಧನೆಗೆ ದೇಹವು ಅನುಕೂಲವಿರುವದರಿಂದ ಅದನ್ನು ದುರ್ಲಕ್ಷಿಸಿ ನಾಶಗೊಳಿಸಬಾರದು. ಕೇವಲ ರಾಮಸೇವೆಗಾಗಿಯೇ ದೇಹವನ್ನು ರಕ್ಷಿಸಬೇಕಲ್ಲದೆ ವಿಷಯಸುಖಕ್ಕಾಗಿ ರಕ್ಷಿಸಬಾರದು. ದಿನಾಲು ಪ್ರಾತಃಕಾಲದಲ್ಲೆಳಬೇಕು, ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಸ್ನಾನಾದಿಗಳನ್ನು ಮಾಡಿ ಶ್ರೀರಾಮನ ಮಾನಸಪೂಜೆಯನ್ನು ಮಾಡಬೇಕು. ಮಾನಸಪೂಜೆಯೆಂದರೆ ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀರಾಮನನ್ನು ಅಪಾದಮಸ್ತಕವಾಗಿ ಹೃದಯದಲ್ಲಿ ಸ್ಥಾಪಿಸಬೇಕು. ಬಳಿಕ ಮನಸ್ಸಿನಲ್ಲಿಯೇ ಆತನನ್ನು ಷೋಡಶೋಪಚಾರಗಳಿಂದ ಪೂಜಿಸಬೇಕು. ಧೂಪ-ದೀಪ ನೈವೇದ್ಯಾದಿಗಳನ್ನು ಸಮರ್ಪಿಸಬೇಕು. ಬಾಹ್ಯದಲ್ಲಿ ದೇವರನ್ನು ಪೂಜಿಸುವಂತೆ ಅಂತರಂಗದಲ್ಲಿ ಮಾನಸೋಪಚಾರಗಳಿಂದ ದೇವರನ್ನು ಪೂಜಿಸುವದೇ ಮಾನಸಪೂಜೆಯು; ಭಗವಂತನಿಗೆ ಈ ಮಾನಸಪೂಜೆಯು ವಿಶೇಷವಾಗಿ ಸೇರುತ್ತದೆ. ಯಾಕಂದರೆ ಮನಃಪೂರ್ವಕ ಮಾಡಿದ ಪೂಜೆಯೇ ಭಗವಂತನಿಗೆ ಪ್ರಿಯವೆನಿಸುವದು. ಹೀಗೆ ಮಾನಸಪೂಜೆಯಿಂದ ಭಗವಂತನನ್ನು ಯಾವನು ತೃಪ್ತಿಗೊಳಿಸುವನೋ ಅವನು ನಿಶ್ಚಯವಾಗಿ ಭಗವತ್ಕೃಪೆಗೆ ಪಾತ್ರನಾಗುವನು.

ಈ ಮೇರೆಗೆ ಬ್ರಹ್ಮಚೈತನ್ಯರು ಬೋಧಿಸಲು ಸರಸ್ವತೀಸಾಧ್ವಿಯು ತುಂಬಾ ಸಂತೋಷಭರಿತಳಾದಳು. ಮೊದಲೇ ಪ್ರಾಪ್ತವಾದ ವಿರಕ್ತಿಯು

ದ್ವಿಗುಣಿತವಾಯಿತು. ಆ ಸಾಧ್ವಿಯು ಪತಿಯು ಹೇಳಿದಂತೆ ಆಚರಿಸ ಹತ್ತಿದಳು. ಸರ್ವದಾ ರಾಮಭಜನೆಯಲ್ಲಿ ಆಸಕ್ತಳಾದಳು. ಶುಭ್ರವಸ್ತ್ರಗಳಿಂದಲೂ, ತುಳಸೀಮಾಲೆಯಿಂದಲೂ ಆ ಸಾಧ್ವಿಯು ಪರಿಶೋಭಿಸ ಹತ್ತಿದಳು. ಆ ಸಾಧ್ವಿಯ ವಿಷಯವಾಸನೆಯಲ್ಲ ಅಳಿದು ಹೋಯಿತು. ಸಮರ್ಥನಾದ ಪತಿಯು ಉಪದೇಶ ಮಾಡಲು ಆಕೆಯಲ್ಲಿ ವಿಷಯಹಂಬಲಕ್ಕೆ ಅವಕಾಶವೆಲ್ಲಿಂದ ಬರಬೇಕು? ಪ್ರಿಯವಾಚಕರೇ, ನಿಜವಾದ ಭಗವದ್ಧರ್ಮವು ಇಂಥವರಲ್ಲಿಯೇ ಪ್ರಕಟವಾಗುವದು. ಯಾರಿಗೆ ವಿಷಯಗಳ ತೃಷ್ಣೆಯು ಇರುವದಿಲ್ಲವೋ, ಯಾರಿಗೆ ವಿಷಯಸುಖದ ಭ್ರಾಂತಿಯಿಲ್ಲವೋ ಅವರೇ ದೊಡ್ಡವರು. ವಿಷಯಸುಖಕ್ಕೆ ಮೆಚ್ಚಿದವರಿಗೆ ದೊಡ್ಡವರೆಂದು ಯಾರೂ ಅನ್ನಲಾರರು. ಇನ್ನು ಸಜ್ಜನರಾದವರೂ ಜ್ಞಾನಿಗಳಾದವರೂ ವಿಷಯಸೇವನೆ ಮಾಡುವದಿಲ್ಲವೆಂತಲ್ಲ. ಆದರೆ ಆ ಸೇವನೆಯಲ್ಲಿ ಅವರ ಆಸಕ್ತಿಯಿರುವದಿಲ್ಲ. ವಿಷಯಸೇವನೆಯಿಂದ ಅವರು ಸುಖಿಗಳೆಂದು ಭಾವಿಸುವದಿಲ್ಲ. ವಿಷಯಗಳು ಇಲ್ಲವಿದ್ದರೆ ತಳಮಳಗೊಳ್ಳುವದಿಲ್ಲ. ವಿಷಯಸಂಪಾದನೆಗಾಗಿ ಯಾವ ಯತ್ನವನ್ನೂ ಮಾಡುವದಿಲ್ಲ.

ಸರಸ್ವತೀಬಾಯಿಯು ಪತಿಯ ಬೋಧದಿಂದ ಆನಂದಿತಳಾದಳು. ಮತ್ತು ಪತಿಯ ಉಪದೇಶದಿಂದ ಅಷ್ಟಾಂಗಯೋಗವನ್ನು ಕಲಿತಳು. ಆಕೆಗೆ ಸಹಜವಾಗಿ ಸಮಾಧಿಯು ಹತ್ತಲಾರಂಭಿಸಿತು. ಪತ್ನಿಯಲ್ಲಿ ಬ್ರಹ್ಮಜ್ಞಾನವು ಫಲಿಸಿತೆಂದು ಮಹಾರಾಜರಿಗೆ ನಂಬಿಗೆಯಾಯಿತು. ಆಗ ಅವರು ಪತ್ನಿಯಲ್ಲಿ ಜ್ಞಾನವು ಎಷ್ಟರಮಟ್ಟಿಗೆ ಉಂಟಾಗಿದೆಯೆಂಬದನ್ನು ಪರೀಕ್ಷಿಸಬೇಕೆಂದು ಒಂದು ದಿನ ರಾತ್ರಿಯಲ್ಲಿ ಏಕಾಏಕಿ ಗುಪ್ತರಾದರು. ಮುಂಜಾವಿನಲ್ಲೆದ್ದು ಆ ಸಾಧ್ವಿಯು ನೋಡುತ್ತಾಳೆ, ಪತಿಯೇ ಇಲ್ಲ; ಎಲ್ಲ ಕಡೆಗೂ ನೋಡಿದಳು ಎಲ್ಲಿಯೂ ಸಿಕ್ಕಲಿಲ್ಲ. ಆದರೆ ಆ ಸಾಧ್ವೀಮಣಿಯಲ್ಲಿ ನಿಜವಾದ ಜ್ಞಾನೋದಯವಾಗಿದ್ದದರಿಂದ ಆಕೆಯು ಪತಿಯು ಕಾಣದಂತಾದದ್ದಕ್ಕೆ ಸ್ವಲ್ಪವೂ ಯೋಚಿಸಲಿಲ್ಲ. ತಾವಿದ್ದ ಆಶ್ರಮದ ಕಸಗೂಡಿಸಿ

ಸಾರಿಸಿ ರಂಗವಲ್ಲಿಕೆಯನ್ನು ಹಾಕಿ, ಮೈತೊಳೆದು ಪತಿಯ ಪಾದುಕೆಗಳನ್ನು ಪೂಜಿಸಿ ರಾಮಧ್ಯಾನಾಸಕ್ತಳಾದಳು. ಈ ರೀತಿ ನಾಲ್ಕಾರು ದಿನಗಳು ಕಳೆದವು. ಆದರೂ ಪತಿಯು ಬರಲಿಲ್ಲ. ತನ್ನ ಪರೀಕ್ಷಾರ್ಥವಾಗಿ ಪತಿಯು ಗುಪ್ತನಾಗಿರುವನೆಂದು ತಿಳಿದಳು. ಅವಳು ಸ್ವಲ್ಪವಾದರೂ ಅಂಜಲಿಲ್ಲ. ಇದು ವಿದೇಶವು, ಇಲ್ಲಿ ತಂದೆಯಿಲ್ಲ, ತಾಯಿ ಇಲ್ಲ, ಆಪ್ತೇಷ್ಟರಿಲ್ಲ ಹ್ಯಾಗೆಮಾಡಬೇಕೆಂದು ಯೋಚಿಸಲಿಲ್ಲ. ಪ್ರತ್ಯಕ್ಷ ಶ್ರೀರಾಮನೇ ಯಾರಿಗೆ ಕೈವಾರಿಯಾಗಿರುವನೋ ಅವರಿಗೆ ಯಾತರ ಚಿಂತೆ? ಶ್ರೀರಾಮನು ಸರ್ವತ್ರದಲ್ಲಿಯೂ ವ್ಯಾಪಿಸಿದ್ದರಿಂದ ಅವರಿಗೆ ಸ್ವದೇಶವಾವುದು? ವಿದೇಶವಾವುದು? ಆಪ್ತರಾರು? ಅನಾಪ್ತರಾರು? ಎಲ್ಲರೂ ಆಪ್ತರೇ; ಅಂದಬಳಿಕ ಅವರಿಗೆ ಭಯವೆಲ್ಲಿಯದು!

ಸರಸ್ವತೀಮಾತೆಯು ಕೆಲದಿನ ಬ್ರಹ್ಮಾನಂದದಲ್ಲಿ ಕಾಲಕಳೆದ ಬಳಿಕ ಪತಿಯು ಸ್ವಗ್ರಾಮಕ್ಕೆ ಹೋಗಿರಬಹುದು. ಆದ್ದರಿಂದ ತಾನೂ ಅಲ್ಲಿಗೇ ಹೋಗಬೇಕೆಂದು ಯೋಚಿಸಿದಳು. ಆದರೆ ಒಬ್ಬಳೇ ಹೆಣ್ಣುಮಗಳು ದಾರಿಬಟ್ಟೆಗೊತ್ತಿಲ್ಲದೆ ಹೋಗುವ ಬಗೆಹ್ಯಾಗೆ? ಆಗ ಆಕೆಯು ಕ್ಷಣ ಹೊತ್ತು ಮನಸ್ಸಿನಲ್ಲಿ ಆಲೋಚಿಸಿ ಕೃಷ್ಣಭಟ್ಟನೆಂಬ ಒಬ್ಬ ಬ್ರಾಹ್ಮಣನ ಮನೆಗೆ ಹೋದಳು. ಕೃಷ್ಣಭಟ್ಟನು ಮಹಾರಾಜರ ಪ್ರಿಯಶಿಷ್ಯನಿದ್ದನು. ಮಹಾರಾಜರಲ್ಲಿಯೂ ಅವರ ಪತ್ನಿಯಲ್ಲಿಯೂ ಅವನ ನಿಷ್ಠೆ ಬಹಳ. ಹೀಗಿರಲು, ಅಕಸ್ಮಾತ್ತಾಗಿ ಗುರುಪತ್ನಿಯು ಮನೆಗೆ ಬರಲು, ಕೃಷ್ಣಭಟ್ಟನಿಗೆ ಅತ್ಯಾನಂದವಾಯಿತು. ಅವನು ಅತ್ಯಂತ ಉಲ್ಲಾಸದಿಂದ ಗುರುಪತ್ನಿಗೆ ಸಾಷ್ಟಾಂಗ ನಮಸ್ಕಾರಹಾಕಿ ಕೈಜೋಡಿಸಿ ವಿನಯದಿಂದ ನುಡಿದನೇನಂದರೆ--"ತಾಯಿ, ಬಡವರ ಮನೆಗೆ ಭಾಗೀರಥಿ ಬಂದಂತಾಯಿತು. ನಿನ್ನ ಆಗಮನದಿಂದ ನಮ್ಮ ಪರ್ಣಕುಟೀರವು ಪವಿತ್ರವಾಯಿತು. ನಿನ್ನ ಚರಣಧೂಳಿಯಿಂದ ನಮ್ಮ ಕುಲಕೋಟಿಯೆಲ್ಲ ಉದ್ಧೃತವಾಯಿತು. ನಾನು ಧನ್ಯನಾದೆನು. ಅಪ್ಪಣೆಯಾಗಬೇಕು." ಈ ಮಾತಿಗೆ ಕೃಷ್ಣಭ

ಟ್ಟನು ಪ್ರಾರ್ಥಿಸಲು, ಆ ಸಾಧ್ವಿಯು ಕುಳಿತುಕೊಂಡು—ಅಪ್ಪಾ ಕೃಷ್ಣ ಭಟ್ಟನೇ, ಮಹಾರಾಜರು ಇದುವರೆಗೂ ಬರಲಿಲ್ಲ. ಬಹುಶಃ ಅವರು ಗೋಂದಾವಲಿಗೇ ಹೋಗಿರಬಹುದೆಂದು ತೋರುತ್ತದೆ, ಆದ್ದರಿಂದ ನಾನೂ ಅತ್ತ ಕಡೆಗೇ ಹೋಗಬೇಕೆಂದು ಮಾಡಿದ್ದೇನೆ. ನೀನು ನನ್ನನ್ನು ಗೋಂದಾವಲಿಗೆ ಕಳಿಸಿ ಬರಬೇಕು; ಎಂದು ನುಡಿದಳು. ಗುರುಪತ್ನಿಯ ಆ ಮಾತನ್ನು ಕೇಳಿ, ಕೃಷ್ಣಭಟ್ಟನು ಸಂತೋಷದಿಂದ—ತಾಯಿ, ಏನೂ ಅಡ್ಡಿಯಿಲ್ಲ. ನಾನು ತಮ್ಮ ಚರಣಸೇವಕನೇ ಇರುತ್ತೇನೆ. ಅವಶ್ಯವಾಗಿ ಗುರುಸನ್ನಿಧಿಗೆ ತಮ್ಮನ್ನು ಮುಟ್ಟಿಸಿಬರುವೆನು. ಆದರೆ ನನ್ನ ಪ್ರಾರ್ಥನೆ ಯೇನೆಂದರೆ—ತಾವು ನಾಲ್ಕು ದಿವಸ ಈ ಮನೆಯಲ್ಲಿರಬೇಕು; ಇದು ನಮ್ಮ ಮನೆಯಲ್ಲ ತಮ್ಮ ಮನೆಯೇ ಇರುವದು, ನಾಲ್ಕುದಿನ ನಮ್ಮಗಳ ಕಡೆಯಿಂದ ಸೇವೆ ಪರಿಗ್ರಹಣ ಮಾಡಬೇಕೆಂದು ಬಡವರ ಪ್ರಾರ್ಥನೆ ಯಿದೆ.

ಈ ಪ್ರಕಾರ ಕೃಷ್ಣಭಟ್ಟನು ಪ್ರಾರ್ಥಿಸಲು ಸರಸ್ವತೀಮಾತೆಯು ಆತನ ಸದ್ಭಕ್ತಿಯನ್ನು ತಿಳಿದು ಆತನ ಮನೆಯಲ್ಲಿ ನಾಲ್ಕುದಿನಗಳ ವರೆಗೆ ಇರಲು ಒಪ್ಪಿಕೊಂಡಳು. ಕೃಷ್ಣಭಟ್ಟನು ಬಡವನಿದ್ದನು. ಆದರೂ ಆತನು ನಾಲ್ಕು ದಿನಗಳ ವರೆಗೆ ಗುರುಪತ್ನಿಯ ಸೇವೆಯನ್ನು ಬಹು ಆಸ್ಥೆ ಯಿಂದ ಮಾಡಿದನು. ಗೊಂದಾವಲಿ ಬಿಟ್ಟಂದಿನಿಂದ ಆ ಸಾಧ್ವಿಯ ತಲೆಯು ಎಣ್ಣೆಯನ್ನು ಕಂಡಿದ್ದಿಲ್ಲ. ಕೃಷ್ಣಭಟ್ಟನ ಹೆಂಡತಿಯು ಆ ಸಾಧ್ವಿಯ ಜಡೆ ಗಳಿಗೆ ಎಣ್ಣೆ ಹಚ್ಚಿ ಹಿಕ್ಕಿ ಎರೆದಳು. ಕೈಗೆ ಬಳೆಗಳನ್ನಿಡಿಸಿದಳು. ಸೌಭಾ ಗ್ಯಾಲಂಕಾರಗಳನ್ನು ಕೊಟ್ಟಳು. ಅವರು ಮಾಡುವ ಈ ಪ್ರೇಮದ ಉಪಚಾರವನ್ನು ಆ ಸಾಧ್ವಿಯು ಮೌನದಿಂದ ಕೈಕೊಂಡಳು ಮಾತ್ರ. ನಾಲ್ಕು ದಿನ ಆ ಮಾತೆಗೆ ಸುಗ್ರಾಸ ಭೋಜನವಾಯಿತು. ಬಳಿಕ ಕೃಷ್ಣ ಭಟ್ಟನು ಆ ಸಾಧ್ವಿಯನ್ನು ಕರೆದುಕೊಂಡು ಗೊಂದಾವಲಿಗೆ ಹೋಗುವ ದಕ್ಕೆಂದು ಹೊರಟನು. ಪಯಣದ ಮೇಲೆ ಪಯಣ ಮಾಡುತ್ತ ಖಾತವ

ಳಕ್ಕೆ ಬಂದರು. ಸರಸ್ವತೀಮಾತೆಯ ತಾಯಿ-ತಂದೆಗಳು ಅದೇವೂರಲ್ಲಿದ್ದರು. ತಾಯಿಯನ್ನು ಭೇಟಿಯಾಗಬೇಕೆಂದು ಆ ಸಾಧ್ವಿಯು ಮನೆಗೆ ಹೋದಳು. ಮಗಳ ವಲ್ಕಲವಸನಗಳನ್ನೂ, ವಿರಕ್ತವೇಷವನ್ನೂ ತುಳಸೀ ಮಾಲೆ ಮೊದಲಾದವುಗಳನ್ನೂ ನೋಡಿ ಆ ತಾಯಿಗೆ ಮನಸಿಲ್ಲಿ ಬಹು ಕಷ್ಟವಾಯಿತು. ಮಗಳು ಎಂಥ ಮನೆಗೆ ಬಿದ್ದಳಲ್ಲ! ಅಳಿಯನು ಸಾಧುವಾದನು. ಮಗಳು ವನವಾಸ ಅನುಭವಿಸಬೇಕಾಯಿತು ಎಂಬ ವಿಚಾರಗಳಿಂದ ಆಕೆಯ ಕಣ್ಣಲ್ಲಿ ಅಶ್ರುಗಳಾಡಿದವು. ತಾಯಿಗೆ ಹೀಗೆ ದುಃಖವಾದದ್ದರ ಕಾರಣವು ಆ ಸಾಧ್ವಿಗೆ ಹೊಳೆಯದೆ ಇರಲಿಲ್ಲ. ಆಕೆಯು ಕೂಡಲೆ ಕಂಡು ಹಿಡಿದು, ನುಡಿದಳೇನಂದರೆ—ಮಾತೃಶ್ರೀ, ನನ್ನ ಇರವನ್ನು ನೋಡಿ ನಿನಗೆ ದುಃಖವಾದಂತೆ ತೋರುತ್ತದೆ ನಾಲ್ಕು ಮಂದಿಯಂತೆ ನಾನು ಸಂಸಾರದಲ್ಲಿಲ್ಲವೆಂದು ನೀನು ವ್ಯಸನ ಪಡುವಂತೆ ತೋರುತ್ತಿದೆ. ಆದರೆ ಇದು ನಿನ್ನ ಅಜ್ಞಾನವು. ನನ್ನ ಪ್ರಾಚೀನ ಪುಣ್ಯವಶದಿಂದ ನಾನು ಸಮರ್ಥರ ಪಾಣಿಗ್ರಹಣ ಮಾಡಿ ಧನ್ಯಳಾದೆನು. ಜನ್ಮ-ಮರಣಗಳ ಭವಚಕ್ರದಿಂದ ಪಾರಾದೆನು. ನೀವು ಉತ್ತಮ ಅಳಿಯನನ್ನು ಆರಿಸಿರುವಿರಿ. ನಿಮ್ಮ ಕುಲಕೋಟಿಯು ಉದ್ಧೃತವಾಗಿ ಹೋಯಿತು. ಯಾರ ಚರಣಗಳ ಸೇವೆಯನ್ನು ದೇವತೆಗಳು ಕೂಡಾ ಇಚ್ಛಿಸುವರೋ ಯಾರ ಮಹಿಮೆಯು ಅಪಾರವಾಗಿರುವದೋ ಅಂಥ ಮಹಾತ್ಮರ ಚರಣಸೇವೆಯು ನನಗೆ ನಿರಂತರವಾಗಿ ದೊರಕಿದೆಯೆಂದ ಬಳಿಕ ನನ್ನ ಸಮಾನ ಧನ್ಯರಿನ್ನಾರು? ಆ ಮಹಾಮಹಿಮರ ಕೃಪೆಯಿಂದ ನಾನು ಅಷ್ಟಾಂಗಯೋಗಗಳನ್ನು ತಿಳಿದೆನು. ಬ್ರಹ್ಮಾನಂದವು ನನಗೆ ಪ್ರಾಪ್ತವಾಗಿರುವದು. ಸದ್ಗುರು ತುಕಾರಾಮ ಸಾಧುಗಳ ದರ್ಶನವಾಯಿತು. ಅಪ್ಪಾ, ಭಗವಂತನ ವೈಭವವನ್ನು ಎಷ್ಟೆಂದು ಹೇಳಲಿ? ಜನ್ಮಸಾರ್ಥಕ ಮಾಡಿಕೊಳ್ಳಬೇಕೆನ್ನುವವರು ಶ್ರೀರಾಮನ ಚರಣಗಳನ್ನು ಧ್ಯಾನಿಸಬೇಕು. ಶ್ರೀರಾಮನ ಮಂಗಲನಾಮಗಳನ್ನು ಗಾಯನ ಮಾಡಬೇಕು. ಅಂಥ ಮಂಗಲ ನಾಮವು ನನ್ನ

ನಾಲಿಗೆಯ ಮೇಲೆ ಕುಣಿದಾಡುತ್ತಿದೆಯೆಂದ ಒಳಿಕ ನಾನು ಬಡವಿಯೂ, ದೈವಹೀನೆಯೂ ಎಂದು ನೀನು ತಿಳಿಯುವಿಯಾ? ಅಸ್ಥಿರಸಂಸಾರವು; ಮನೆಯಲ್ಲಿ ನಾಲ್ಕು ದುಡ್ಡು ರೊಕ್ಕ ಇದ್ದರೆ ಅಥವಾ ಹೊಟ್ಟೆಯಲ್ಲಿ ನಾಲ್ಕು ಜನ ಮಕ್ಕಳಾದರೆ ಅವರು ಸುಖಿಗಳೆಂದು ಒಗೆಯುವಿಯಾ? ಸುಖಿಗಳಾರು? ದುಃಖಿಗಳಾರು? ಇದರ ಕಲ್ಪನೆಯೇ ನಿನಗಿದ್ದಂತೆ ತೋರುವದಿಲ್ಲ. ಯಾರು ನಿತ್ಯತೃಪ್ತರೋ ಅವರೇ ಸುಖಿಗಳು. ಸಂಸಾರದಲ್ಲಿ ತೃಪ್ತಿಯೆಂಬದು ಔಷಧಕ್ಕಾದರೂ ಸಿಕ್ಕುವದಿಲ್ಲ. ಆದ್ದರಿಂದ ಅವರು ಸುಖಿಗಳೆಂದು ಹ್ಯಾಗೆ ತಿಳಿಯುವಿ? ಉದಾಹರಣಾರ್ಥವಾಗಿ ನಿನ್ನನ್ನೇ ತಕ್ಕೊಳ್ಳುವಾ; ನೀನು ಅನೇಕ ಜನ ಮಕ್ಕಳನ್ನು ಹಡೆದಿರುವಿ. ಮನೆಯಲ್ಲಿ ಸಂಪತ್ತೂ ಇರುವದು. ಆದರೂ ನೀನು ಸುಖಿಯೆಂದು ಹೇಳಬಲ್ಲೆಯಾ? ತಳಮಳವು ನಿನ್ನನ್ನು ಬಿಟ್ಟು ಹೋಗಿಗೆಯೋ ಹೇಳು ನೋಡೋಣ? ಆದರೆ ಅದೇ ನಾನು ನಿನ್ನ ದೃಷ್ಟಿಯಿಂದ ಅಸುಖಿಯಾಗಿದ್ದರೂ ನಾನು ನಿಜವಾಗಿಯೂ ಪೂರ್ಣಸುಖಿಯಾಗಿರುತ್ತೇನೆ. ನನ್ನ ಹೊರತು ಜಗತ್ತಿನಲ್ಲಿ ಯಾವದೂ ಇರುವದಿಲ್ಲ. ನನ್ನ ಆನಂದವು ಅಖಂಡವಾಗಿರುತ್ತದೆ. ಅದಕ್ಕೆ ಯಾವ ಕಾಲದಲ್ಲೂ ಭಂಗವುಂಟಾಗುವದಿಲ್ಲ.''

ಈ ಮೇರೆಗೆ ಸರಸ್ವತೀಬಾಯಿಯು ಮಾತನಾಡಲು, ಆಕೆಯ ತಾಯಿಯು ಸುಮ್ಮನಾದಳು. ಪಾಪ! ಆ ಹೆಣ್ಣುಮಗಳಿಗೆ ಇಂಥ ಬ್ರಹ್ಮಜ್ಞಾನದ ರಹಸ್ಯವು ಹ್ಯಾಗೆ ಗೊತ್ತಿರಬೇಕು? ಆಕೆಯು ಸಂಸಾರವೊಂದನ್ನೇ ಬಲ್ಲಳಲ್ಲದೆ ಪಾರಮಾರ್ಥವನ್ನೇನು ಬಲ್ಲಳು? ಸೃಷ್ಟಿಯೆಂದರೇನು? ಪರಮಾತ್ಮ ಅಂದರೇನು? ಮಾಯಾ ಅಂದರೇನು? ಪರಬ್ರಹ್ಮವಸ್ತು ಅಂದರೇನು? ಎಂಬ ಸಂಗತಿಗಳ ಜ್ಞಾನವು ಅವಳಿಗೆ ಹ್ಯಾಗೆ ಇರಬೇಕು? ಎಂಥ ಎಂಥ ಶಾಸ್ತ್ರವೇತ್ತರಾದ ಜನರೇ ಈ ವಿಷಯದಲ್ಲಿ ಕುರುಡರಾಗುತ್ತಿರುವಾಗ ಆ ಹೆಣ್ಣುಮಗಳನ್ನು ಕೇಳುವವರಾರು? ದೊಡ್ಡ ದೊಡ್ಡ ಪಂಡಿತರು ಬರಿಯ ಶಬ್ದಾಡಂಬರವನ್ನು ಬೆಳಿಸುವರೇ ಹೊರತು ಅನುಭ

ವವನ್ನು ಹೇಳಲಾರರು. ಇರಲಿ, ಇಂಥ ಗಹನವಾದ ವಿಷಯದಲ್ಲಿ ಸಹಜ ಗತಿಯುಂಟಾಗಿ ಸರಸ್ವತೀಮಾತೆಯು ನಿತ್ಯ ಬ್ರಹ್ಮಾನಂದವನ್ನು ಸಹಿದು ಜೀವನ್ಮುಕ್ತಾವಸ್ಥೆಯಲ್ಲಿದ್ದದರಿಂದ ಆಕೆಯ ತಾಯಿಗೆ ಸ್ವಲ್ಪ ಸ್ವಲ್ಪ ಸಮಾಧಾನವಾಗಹತ್ತಿತು. ಒಂದೆರಡು ದಿನಗಳಲ್ಲಿ ಆ ಸಾಧ್ವಿಯು ಶ್ರೀರಾಮಸೇವೆಯ ಮಹತ್ವವನ್ನು ತಾಯಿಗೆ ತಿಳಿಸಿಕೊಟ್ಟದ್ದರಿಂದ ಆಕೆಗೆ ಪೂರ್ಣ ಸಮಾಧಾನವಾಯಿತು. ನಿಜವಾಗಿಯೂ ತನ್ನ ಮಗಳು ಧನ್ಯಳಾದಳು ಎಂಬ ಉದ್ಗಾರವು ಆಕೆಯ ಮುಖದಿಂದ ಹೊರಹೊರಟಿತು. ಖಾತವಳದ ಸ್ತ್ರೀಯರೆಲ್ಲರೂ ಸರಸ್ವತೀಮಾತೆಯ ದರ್ಶನದಿಂದ ಪವಿತ್ರ ಮನಸ್ಕರಾಗಹತ್ತಿದರು. ಲೋಕದಲ್ಲಿ ಸಂಗತಿಯಂತೆ ಮತಿಯುತ್ಪನ್ನವಾಗುತ್ತದೆಂಬದು ಸುಳ್ಳಲ್ಲ. ಆದ್ದರಿಂದ ಪ್ರತಿಯೊಬ್ಬರೂ ಯತ್ನಪೂರ್ವಕವಾಗಿ ಸತ್ಸಂಗ ಮಾಡಬೇಕು. ಕಾಲತ್ರಯದಲ್ಲಿಯೂ ದುಸ್ಸಂಗ ಮಾಡಬಾರದು. ತಮ್ಮ ಸೊಸೆಯು ಖಾತವಳಕ್ಕೆ ಬಂದು ಅಲ್ಲಿಯ ಸ್ತ್ರೀಯರಲ್ಲೆಲ್ಲ ಶ್ರೀರಾಮ ಭಜನೆಯನ್ನು ನೆಲೆಗೊಳಿಸಿರುವಳೆಂಬ ಸುದ್ದಿಯನ್ನು ಕೇಳಿ ಗೀತಾಬಾಯಿಗೂ ರಾವಜೀಪಂತರಿಗೂ ತುಂಬಾ ಆಶ್ಚರ್ಯವಾಯಿತು. ಅವರು ತಮ್ಮ ಸೊಸೆಯನ್ನು ಕರೆಯಿಸಿಕೊಂಡು ಆಕೆಯ ಬಾಯಿಂದ ಸಮಸ್ತ ಸಂಗತಿಗಳನ್ನು ಕೇಳಿ ಅತ್ಯಂತ ಸಂತೋಷವನ್ನು ತಾಳಿದರು.

---

## ೧೦ನೆಯ ಅಧ್ಯಾಯ:—ಭಕ್ತೋದ್ಧಾರ.

ನಾಶಿಕದಲ್ಲಿ ತಮ್ಮ ಪತ್ನಿಯು ಬ್ರಹ್ಮಜ್ಞಾನವನ್ನು ಪರೀಕ್ಷಿಸುವದಕ್ಕೆಂದು ಗುಪ್ತರಾದ ಮಹಾರಾಜರು ಉತ್ತರಪ್ರಾಂತದಲ್ಲಿಯ ತೀರ್ಥಾಟನವನ್ನು ಮಾಡುವದಕ್ಕೋಸ್ಕರ ಹೊರಟರು. ಹಲವು ಸ್ಥಳಗಳಲ್ಲಿ ಪೂರ್ವ ಋಣಾನುಬಂಧವುಳ್ಳ ಭಕ್ತರು ಹುಟ್ಟಿ ವಾಸಿಸುತ್ತಿದ್ದದರಿಂದ

ಅವರೆಲ್ಲರಿಗೆ ದರ್ಶನ ಕೊಟ್ಟು ಅವರನ್ನು ಉದ್ಧರಿಸುವ ಕೆಲಸವು ಈ ತೀರ್ಥಾಟನದಲ್ಲಿಯು ಮುಖ್ಯ ಉದ್ದೇಶವಾಗಿತ್ತು. ಬದರಿ, ಜಗನ್ನಾಥ, ಕಾಶಿ, ಗಯಾ ಮುಂತಾದ ಕ್ಷೇತ್ರಗಳನ್ನು ತಿರುಗಿ ಮಹಾರಾಜರು ಇಂದೂರಿಗೆ ಬಂದರು. ಇಂದೂರಲ್ಲಿ ಇವರ ಸದ್ಭಕ್ತರು ವಿಶೇಷವಾಗಿ ದ್ದರು. ಅಂತೆಯೇ ಅವರು ಮೇಲಿಂದ ಮೇಲೆ ಇಂದೂರಿಗೆ ಬರುತ್ತಿದ್ದರು. ಆ ಊರಲ್ಲಿ ಅಸಂಖ್ಯಜನ ಭಕ್ತರು ಮಹಾರಾಜರಿಂದ ಉಪದೇಶ ಹೊಂದಿ ರಾಮಭಕ್ತಿಯಲ್ಲಿ ಆಸಕ್ತರಾದರು. ಶ್ರೀರಾಮಭಕ್ತಿಯು ಸಂಪ್ರದಾಯವು ಹೆಚ್ಚಿತು. ಮಹಾರಾಜರು ಹೋದ ಹೋದಲ್ಲೆಲ್ಲ ಜನರು ಅವರಿಗೆ ಶರಣು ಬರಲಾರಂಭಿಸಿದರು. ಪತಿತರಾದವರನ್ನು ಉದ್ಧರಿಸುವದು ಸಜ್ಜನರ ಕರ್ತವ್ಯವಾದ್ದರಿಂದ ಬಂದವರೆಲ್ಲರಿಗೂ ಮಹಾರಾಜರು ಉಪದೇಶವನ್ನು ಕೊಡುತ್ತಿದ್ದರು. ಸಹಜವಾಗಿ ಅವರಿಂದ ಪ್ರಸಂಗವಶಾತ್ ಹಲವು ದೈವೀ ಚಮತ್ಕಾರಗಳಾಗುತ್ತಿದ್ದವು. ಚಮತ್ಕಾರಗಳೇ ಸಾಧುಗಳ ಮುಖ್ಯ ಲಕ್ಷಣವೆಂದು ಈಗಿನ ಜನರು ತಿಳಿಯುವರು. ಆದರೆ ಚಮತ್ಕಾರವನ್ನು ಮಾಡುವದು ಹಾವಾಡಿಗರ ಕೆಲಸವೆಂದು ನಿಜವಾದ ಸಾಧುಗಳು ತಿಳಿಯುವರು. ಹೀಗಿದ್ದರೂ ಜನರಲ್ಲಿ ವಿಶ್ವಾಸವು ಹುಟ್ಟುವದಕ್ಕೋಸ್ಕರ ಸಾಧುಗಳು ಪ್ರಸಂಗ ನೋಡಿ ದೈವೀಚಮತ್ಕಾರಗಳನ್ನು ತೋರಿಸ ಬೇಕಾಗುತ್ತದೆ.ಚಮತ್ಕಾರಗಳನ್ನು ನೋಡಿದ ಹೊರತು ಜನರಲ್ಲಿ ವಿಶ್ವಾಸ ಹುಟ್ಟದಿರುವದೇ ಇದಕ್ಕೆ ಕಾರಣವು. ಇರಲಿ. ಮಹಾರಾಜರ ಚಮತ್ಕೃತಿಯೂ ಅವರ ಮಹಾಮಹಿಮೆಯೂ ಸರ್ವತೋಮುಖವಾಗಿ ಬೆಳೆಯಿತು. ಜನರು ತಂಡೋಪತಂಡವಾಗಿ ಅವರ ದರ್ಶನಕ್ಕೆ ಬರಲಾರಂಭಿಸಿದರು. ಕೆಲವರು ತಮ್ಮ ಸಾಂಸಾರಿಕ ತಾಪತ್ರಯಗಳನ್ನು ಅವರ ಮುಂದೆ ಹೇಳುತ್ತಿದ್ದರು. ಕೆಲವರು ತಮ್ಮ ಜೇನೆ-ಜೇಸರಿಕೆಯ ಸ್ಥಿತಿಗಳನ್ನು ಹೇಳುವರು. ಪರಸಿಯ ಜನರು ಹೀಗೆ ಮಾಡಿದರೂ ಅವರ ಸದ್‌ಭಕ್ತರು ಅವರ ಬ್ರಹ್ಮಾನಂದವನ್ನು ಸೂರೆಗೊಳ್ಳುತ್ತಿದ್ದರು.

ಇಂದೂರಲ್ಲಿ ಮಹಾರಾಜರು ಕೆಲದಿನಗಳವರೆಗೆ ಇದ್ದರು. ಅಲ್ಲಿಯ ಭಕ್ತರ ಮನಸ್ಸನ್ನು ಸಂತೋಷಪಡಿಸಿದ ಬಳಿಕ ದ್ವಾರಕಾ ಮೊದಲಾದವುಗಳ ಕಡೆಗೆ ಹೊರಟರು. ಮಾರ್ಗದಲ್ಲಿ ಅಸಂಖ್ಯ ಜನರು ದರ್ಶನಕ್ಕಾಗಿ ಬರುತ್ತಿದ್ದರು. ಸಕ್ಕರೆಯು ಕರಣೆಯಿದ್ದಲ್ಲಿ ಇರುವೆಗಳು ಬರುವದು ಸ್ವಾಭಾವಿಕವಿರುವಂತೆ ಸತ್ಪುರುಷರಿದ್ದಲ್ಲಿಗೆ ಜನರು ಬರುವದು ಸ್ವಾಭಾವಿಕವಿರುವದು. ಅವರ ಕೀರ್ತಿಯು ದಿಗಂತವಾಗಿ ಹಬ್ಬಿತು. ಹೀಗೆ ಹಬ್ಬಿದ ಮಹಾರಾಜರ ಕೀರ್ತಿಯನ್ನು ಕೇಳಿ ಇಬ್ಬರು ಮಾಂತ್ರಿಕರು ಮನಸ್ಸಿನಲ್ಲಿ ಮತ್ಸರತಾಳಿದರು. ಆ ಮಾಂತ್ರಿಕರು ಅಂಥ ಇಂಥವರಿದ್ದಿಲ್ಲ. ಜಾರಣ ಮಾರಣ ಮಂತ್ರವಿದ್ಯೆಯಲ್ಲಿ ಅತ್ಯಂತ ಪ್ರವೀಣರಿದ್ದರು. ಅವರನ್ನು ಕಂಡು ಸಮಸ್ತ ಜನರೂ ಭಯದಿಂದ ನಡುಗುತ್ತಿದ್ದರು. ಇಂಥ ಯೋಗ್ಯತೆಯು ಸಂಪನ್ನರಾದ ಅವರು, ನಮ್ಮಕಿಂತಲೂ ಮಹಾರಾಜರು ಶ್ರೇಷ್ಠರಾದರೇ, ಅವರಿಗೇನು ಮಂತ್ರವಿದ್ಯೆಯು ಗೊತ್ತಿದೆಯೋ? ಏನೂ ಇಲ್ಲ. ಹೀಗಿದ್ದರೂ ಅವರ ಬಳಿಗೆ ಸಾವಿರಾರು ಜನರು ಯಾಕೆ ಹೋಗುತ್ತಿರುವರು? ನಮ್ಮ ಬಳಿಗೆ ಜನರು ಯಾಕೆ ಬರುವದಿಲ್ಲ? ಅವರಲ್ಲಿ ಜನ ವಶೀಕರಣ ವಿದ್ಯೆಯಿರಬೇಕು. ಆ ವಿದ್ಯೆಯನ್ನು ನಾವು ಅವರಿಂದ ಕಲಿತುಕೊಂಡರೆ ನಮ್ಮ ಕೀರ್ತಿಯು ವಿಶೇಷವಾಗಿ ಬೆಳೆಯುವದು ಎಂದು ದುರ್ಬುದ್ಧಿಯನ್ನು ತಾಳಿ ಒಂದು ದಿನ ಅವರು ಮಹಾರಾಜರ ಬಳಿಗೆ ಹೋದರು. ಮತ್ತು ಅವರಿಗೆ ನಮಸ್ಕಾರ ಮೊದಲಾದವುಗಳನ್ನೇನೂ ಮಾಡದೆ ತಮ್ಮ ದೊಡ್ಡಿಸ್ತನವನ್ನು ಅವರ ಮುಂದೆ ಹೇಳಿ ನಾವು ನಿಮ್ಮಲ್ಲಿದ್ದ ಜನವಶೀಕರಣ ವಿದ್ಯೆಯನ್ನು ಕಲಿಯಬೇಕೆಂದು ಬಂದಿರುವೆವು. ಆದನ್ನಷ್ಟು ನಮಗೆ ಕಲಿಸಿರಿ ಎಂದರು. ಆಗ ಮಹಾರಾಜರು ನಕ್ಕು--ಮಹಾರಾಜ, ನನ್ನ ಬಳಿಯಲ್ಲಿ ಯಾವ ವಿದ್ಯೆಯೂ ಇಲ್ಲ. ನಾನು ಬಡಗೋಸಾವಿಯು, ಸುಮ್ಮನೆ ರಾಮಭಜನೆಯನ್ನು ಮಾಡುತ್ತ ತಿರುಗುತ್ತೇನೆ. ಜನರು ನನ್ನ ಬಳಿಗೆ ಯಾಕೆ ಬರುತ್ತಿ

ರುವರೋ ನನಗೆ ತಿಳಿಯದು! ಅದು ಪ್ರಭುವಾದ ಶ್ರೀರಾಮಚಂದ್ರನೊಬ್ಬನಿಗೇ ಗೊತ್ತು; ಎಂದು ನುಡಿದರು. ಅದನ್ನು ಕೇಳಿ ಆ ಮಾಂತ್ರಿಕರಿಗೆ ಸಿಟ್ಟುಬಂದಿತು. ಅವರು ಅಧಿಕಾರ ಮುದ್ರೆಯಿಂದ ನುಡಿದರೇನಂದರೆ—ಗೋಸಾವಿಗಳೇ, ಹೀಗೆ ಕಿವಿಯಮೇಲೆ ಕೈಯಿಟ್ಟುಕೊಳ್ಳಲಿಕ್ಕೆ ಎಲ್ಲರಿಗೂ ಬರುತ್ತದೆ. ನಮ್ಮ ಯೋಗ್ಯತೆಯನ್ನು ತಿಳಿಯದೆ ನೀವು ಹೀಗೆ ಮಾತಾಡುತ್ತೀರಿ ಏನು. ಒಳ್ಳೇ ಮಾತಿನಿಂದ ನೀವು ನಿಮ್ಮಲ್ಲಿದ್ದ ವಿದ್ಯೆಯನ್ನು ನಮಗೆ ಕಲಿಸಿರಿ. ಇಲ್ಲವಿದ್ದರೆ ನೀವು ಕಷ್ಟಕ್ಕೊಳಗಾದೀರಿ. ಮಾಂತ್ರಿಕರ ಸಾಮರ್ಥ್ಯವು ಇದುವರೆಗೂ ನಿಮಗೆ ಗೊತ್ತಿರಲಿಕ್ಕಿಲ್ಲ!

ಈ ಪ್ರಕಾರ ಮಾಂತ್ರಿಕರು ಉದ್ದಾಮತನದಿಂದ ನುಡಿಯಲು ಮಹಾರಾಜರು ವಿನಯದಿಂದ—ಮಾಂತ್ರಿಕರೇ, ನೀವು ಸಮರ್ಥರಿರಬಹುದು; ಮಂತ್ರವಿದ್ಯೆಯು ನಿಮಗೆ ಬರುತ್ತಿರಬಹುದು. ಆದರೆ ನನಗೆ ಮಂತ್ರವಿದ್ಯೆಯ ಜ್ಞಾನವಿಲ್ಲವಾದ್ದರಿಂದ ನಾನು ನಿಮಗೆ ಏನನ್ನು ಕಲಿಸಲಿ? ಸುಮ್ಮನೆ ನನ್ನ ಮೇಲೆ ಸಿಟ್ಟಾದರೆ ಉಪಾಯವಿಲ್ಲ ಎಂದರು. ಅದನ್ನು ಕೇಳಿ ಮಾಂತ್ರಿಕರ ಸಿಟ್ಟು ಹೆಚ್ಚಾಯಿತು. ಇವನು ಒಳ್ಳೇ ಮಾತಿನಿಂದ ಹಾದಿಗೆ ಬರುವದಿಲ್ಲ ಇವನಿಗೆ ಚನ್ನಾಗಿ ಕೈತೋರಿಸಬೇಕು ಎಂದು ನಿಶ್ಚಯಿಸಿ ಬಳಿಕ ಆ ಇಬ್ಬರೂ ಮಾಂತ್ರಿಕರು ಸ್ನಾನ ಮಾಡಿ ಮಂತ್ರಪುರಶ್ಚರಣವನ್ನಾರಂಭಿಸಿ ನಾಗಪಾಶದಿಂದ ಮಹಾರಾಜರನ್ನು ಪ್ರತಿಬಂಧಿಸಿದರು. ಆ ಹಿಂಸೆಯನ್ನು ತಾಳಲಾರದೆ ಮಹಾರಾಜರು ತಾವಾಗಿಯೇ ನಮಗೆ ಶರಣು ಬರುವರೆಂದು ಆ ಮಾಂತ್ರಿಕರು ತಿಳಿದಿದ್ದರು. ಮೂರ್ಖರಿಗೆ ತಮ್ಮ ಶಕ್ತಿಯ ವಿಷಯವಾಗಿ ವೃಥಾಭಿಮಾನವಿದ್ದು, ಅದೇ ಸೊಕ್ಕಿನಲ್ಲಿಯೇ ಅವರು ಅಂಧರಾಗಿರುತ್ತಾರೆ. ಪರರ ಸಾಮರ್ಥ್ಯವಾಗಲಿ, ತೇಜಸ್ಸಾಗಲಿ ಅವರ ಲಕ್ಷ್ಯದಲ್ಲಿ ಬರುವದಿಲ್ಲ. ಇದರಂತೆ ಆ ಮಾಂತ್ರಿಕರ ಸ್ಥಿತಿಯೂ ಆಗಿತ್ತು. ಅವರು ನಾಗಪಾಶದಿಂದ ಮಹಾರಾಜರನ್ನು ಪ್ರತಿಬಂಧಿಸಿ ಮುಂದೇನಾಗುತ್ತದೋ ಎಂದು ನೋಡತೊಡಗಿದರು. ಆದರೆ

ಮೂರು ದಿನಗಳಾದರೂ ಮಹಾರಾಜರಿಗೆ ಆ ನಾಗಪಾಶದಿಂದ ಏನೂ ವ್ಯಥೆಯಾದದ್ದು ಕಂಡು ಬರಲಿಲ್ಲ. ನಾಲ್ಕನೇ ದಿನ ಮಾಂತ್ರಿಕರು ಅವರ ಬಳಿಗೆ ಹೋದರು. ಮಹಾರಾಜರು ಧ್ಯಾನಸ್ಥರಾಗಿ ಕುಳಿತಿದ್ದರು. ಮುಂದೆ ಕೆಲ ಹೊತ್ತಿನ ಮೇಲೆ ಕಣ್ಣು ತೆರೆದು ಮಾಂತ್ರಿಕರನ್ನು ಕುರಿತು ಇಂತು ಉಪದೇಶ ಮಾಡಿದರು. ಹೇ, ಮಾಂತ್ರಿಕರೆ, ಈ ನಿಮ್ಮ ಮಂತ್ರ ಶಕ್ತಿಯು ಇಷ್ಟೇ ಅಲ್ಲವೇ? ಬಲ್ಲವರು ಹೀಗೆ ಮಂತ್ರಶಕ್ತಿಯಿಂದ ಪರ ಪೀಡೆ ಮಾಡಬಾರದು. ಪರನಿಂದೆ ಹಾಗು ಪರಪೀಡೆಗಳು ಅಂಧಂತಮಸ್ಸಿನಲ್ಲಿ ಕೆಡಹುತ್ತವೆ. ಆದ್ದರಿಂದ ವಿವೇಕಸಂಪನ್ನರು ಇಂಥ ದುಷ್ಪ್ರಯೋಗ ಮಾಡಬಾರದು. ಜಗತ್ತಿಗೆ ಮಂಗಲಕರನಾದ ಶ್ರೀರಾಮನ ಭಜನೆಯಲ್ಲಿ ಆಸಕ್ತರಾಗಬೇಕಲ್ಲದೆ ಇಂಥ ಮಂತ್ರವಿದ್ಯೆಯಲ್ಲಿ ಆಸಕ್ತರಾಗಬಾರದು.

ಈ ಮೇರೆಗೆ ಉಪದೇಶ ಮಾಡಿದರೂ ಆ ಮಾಂತ್ರಿಕರ ಮನಸ್ಸು ತಿರುಗಲಿಲ್ಲ. ಇವರು ನಾಗಪಾಶದಿಂದ ಹಣ್ಣಿಗೆ ಬಂದದ್ದರಿಂದ ಹೀಗೆ ಮಾತಾಡುವರೆಂದು ತಿಳಿದರು. ಮತ್ತು ಆ ನಾಗಪಾಶವನ್ನು ತಕ್ಕೊಳ್ಳ ಬಂದರು. ಇದನ್ನು ತಿಳಿದು ಮಹಾರಾಜರು "ಜಯಜಯ ರಘುವೀರ ಸಮರ್ಥ" ಎಂದು ಉಚ್ಚರಿಸಿ ಕೂತಸ್ಥಳದಿಂದ ಉತ್ಥಾನ ಮಾಡಿದರು. ಕೂಡಲೆ ನಾಗಪಾಶವು ಹರಿದು ತುಂಡು ತುಂಡಾಯಿತು. ಮಾಂತ್ರಿಕರು ಈ ಅದ್ಭುತ ಚಮತ್ಕಾರವನ್ನು ನೋಡಿ ಬೆರಗಾದರು. ಯಾವ ನಾಗಪಾಶದಿಂದ ಪ್ರಾಣಿಗಳು ಇಹಲೋಕ ಬಿಟ್ಟು ಹೊರಟು ಹೋಗುವರೋ ಅಂಥ ಉಗ್ರವಾದ ಪಾಶವನ್ನು ಮೂರು ದಿನಗಳ ವರೆಗೆ ನಿರ್ವ್ಯಥೆಯಿಂದ ಧರಿಸಿದರು ಮತ್ತು ಈ ದಿನ ಆ ಪಾಶವನ್ನು ಸಹಜವಾಗಿ ಹರಿದು ಚಲ್ಲಿದರು. ಅಹಾ! ಎಂಥ ಅದ್ಭುತ ಸಾಮರ್ಥ್ಯವಿದು? ಇವರು ನಿಶ್ಚಯವಾಗಿಯೂ ದೇವಾಂಶರು. ಎಂದು ನುಡಿದು ಆ ಮಾಂತ್ರಿಕರು ಮಹಾರಾಜರಿಗೆ ಶರಣುಬಂದರು. ದಯಾಘನರಾದ ಮಹಾರಾಜರು ಅವರ ಅಪರಾಧವನ್ನು ಕ್ಷಮಿಸಿ ಅವರಿಗೆ ಶ್ರೀರಾಮನಾಮ ಮಂತ್ರೋಪದೇಶವನ್ನು ಮಾಡಿದರು.

ಅವರಲ್ಲಿ ಒಬ್ಬನು ಮಹಾರಾಜರ ನಿಸ್ಸೀಮಭಕ್ತನಾದನು. ಆತನ ಏಕನಿಷ್ಠೆಯ ಸೇವೆಯನ್ನು ನೋಡಿ ಮಹಾರಾಜರು ಅವನಿಗೆ ಸಚ್ಚಿದಾನಂದ ಎಂಬ ಬಿರುದನ್ನು ಕೊಟ್ಟು ತಮ್ಮ ಬಳಿಯಲ್ಲಿಟ್ಟುಕೊಂಡರು. ಮತ್ತೊಬ್ಬನನ್ನು ಸಂಸಾರ ಮಾಡಿಕೊಂಡಿರೆಂದು ಆಶೀರ್ವದಿಸಿ ಕಳಿಸಿಕೊಟ್ಟರು.

ಸಚ್ಚಿದಾನಂದನು ಏಕನಿಷ್ಠೆಯಿಂದ ಸೇವೆ ಮಾಡಿ ತಪಸ್ಸಿದ್ಧಿಯನ್ನು ಪಡೆದನು. ಆತನು ಮಹಾರಾಜರ ಸಂಗಡ ಪರ್ಯಟನ ಮಾಡುತ್ತಿದ್ದನು. ರಾಮೇಶ್ವರದ ಯಾತ್ರೆಗೆ ಮಹಾರಾಜರು ಹೊರಟರು, ಅವರು ರೇಲ್ವೆಸ್ಟೇಶನ್ನಕ್ಕೆ ಬಂದರು. ಗಾಡಿಯು ಬರುವದಕ್ಕೆ ಇನ್ನೂ ಅವಕಾಶವಿದ್ದದರಿಂದ ಸಮೀಪದಲ್ಲಿರುವ ಧರ್ಮಶಾಲೆಯಲ್ಲಿ ಹೋಗಿ ಸ್ವಲ್ಪ ವಿಶ್ರಾಂತಿಗಾಗಿ ಮಲಗಿಕೊಂಡರು. ಅಷ್ಟರಲ್ಲಿ ಗಾಡಿಯು ಬಂದಿತು. ಮಹಾರಾಜರು ಎದ್ದು ಸ್ಟೇಶನಕ್ಕೆ ಹೋಗುವಷ್ಟರಲ್ಲಿ ಗಾಡಿಯು ಮುಂದೆ ಸಾಗಿತು. ಮಹಾರಾಜರ ಸಂಗಡ ಇದ್ದ ಸಚ್ಚಿದಾನಂದನಿಗೆ ಈ ಸಂಗತಿಯು ಸಹನವಾಗಲಿಲ್ಲ. ಅವನು ಸಿದ್ಧಿಯ ಬಲದಿಂದ ಗಾಡಿಯನ್ನು ಒಮ್ಮೆಲೆ ನಿಲ್ಲಿಸಿ ಬಿಟ್ಟನು. ಡ್ರಾಯವ್ಹರನು ಎಂಜಿನಕ್ಕೆ ಏನಾಯಿತೋ ಎಂದು ಸೂಕ್ಷ್ಮರೀತಿಯಿಂದ ಶೋಧ ಮಾಡಲಾರಂಭಿಸಿದನು ಈ ಎಲ್ಲ ಸಂಗತಿಯು ಮಹಾರಾಜರ ಲಕ್ಷ್ಯದಲ್ಲಿ ಬರಲು ಅವರು ಗಾಡಿಯು ಪ್ರಾರಂಭವಾಗುವಂತೆ ಮಾಡಿ ಶಿಷ್ಯನನ್ನು ಕುರಿತು ನುಡಿದರೇನಂದರೆ—"ಎಲೈ ಶಿಷ್ಯನೇ, ನೀನು ನಿನ್ನ ಮೊದಲಿನ ತಾಮಸ ಗುಣವನ್ನು ಇನ್ನೂ ಬಿಟ್ಟಿಲ್ಲ ವೆಂಬಂತೆ ತೋರುತ್ತದೆ. ತಪಸ್ವಿಗಳು ತಮ್ಮ ತಪಸ್ಸನ್ನು ಇಂಥ ಸಂಗತಿಗಳ ವಿಷಯದಲ್ಲಿ ಉಪಯೋಗಿಸಿಕೊಳ್ಳಬಾರದು: ಸಿದ್ಧಿಯನ್ನಂತೂ ಉಪಯೋಗಿಸಲೇ ಕೂಡದು. ಸಾಧಕರಿಗೆ ಅದು ಬಾಧಕವಿರುತ್ತದೆ. ತಪಶ್ಚರ್ಯದಲ್ಲಿ ಆಸಕ್ತನಾದವನಿಗೆ ಸಿದ್ಧಿಗಳು ಪ್ರಾಪ್ತವಾಗುತ್ತವೆ. ಆದರೆ ವಿವೇಕಿಗಳು ಆ ಸಿದ್ಧಿಗಳನ್ನು ಬಿಸುಟಿ ಮುಂದೆ ಸಾಗುವರು. ಮಂದಮತಿಗಳು ಮಾತ್ರ ಸಿದ್ಧಿಗಳ ಬಲದಿಂದ ಚಮತ್ಕಾರವನ್ನು ಪ್ರಕಟಿಸುತ್ತ

ಲೋಕದಲ್ಲಿ ಪ್ರತಿಷ್ಠಾವಂತರಾಗುವರು; ಈತನ ತಪಸ್ಸಿನ ಪುಣ್ಯವಿರುವ ವರೆಗೆ ಸಿದ್ಧಿಗಳು ಇವನ ವಶದಲ್ಲಿರುವವು. ಪುಣ್ಯತೀರಿದ ಮರುದಿನ ಅವು ಆತನನ್ನು ಬಿಟ್ಟು ಹೋಗುವವು. ಬಳಿಕ ಅವನು ಅಧಿಕಾರನಿವೃತ್ತನಾದ ಮನುಷ್ಯನಂತೆಯೂ ಶ್ರೀಮಂತಿಕೆ ಅನುಭವಿಸಿ ಬಡತನದಲ್ಲಿ ಕಾಲಿಟ್ಟ ಮನುಷ್ಯನಂತೆಯೂ ನೋರೆ ಸಪ್ಪಗೆ ಮಾಡಿಕೊಂಡು ಅಡ್ಡಾಡಬೇಕಾಗುವದು. ಸಿದ್ಧಿಯನ್ನು ಉಪಯೋಗಿಸಿಕೊಳ್ಳುವ ಮನುಷ್ಯನ ಪುಣ್ಯವು ಕ್ಷೀಣವಾಗುತ್ತದೆ. ಆದರೆ ಯಾವನು ಪೂರ್ಣ ಸಿದ್ಧನಿರುವನೋ ಅಂಥವನಿಗೆ ಸಿದ್ಧಿಯ ಉಪಯೋಗವು ಬಾಧಕವಾಗುವದಿಲ್ಲ. ನೀನು ಈಗಲೇ ಈಕೆಲಸವನ್ನು ಮಾಡಿ ದೊಡ್ಡ ಅಪರಾಧ ಮಾಡಿದೆ. ಆದ್ದರಿಂದ ನಿನಗೆ ಹನ್ನೆರಡು ವರುಷಗಳ ವರೆಗೆ ಶಿಕ್ಷೆಯನ್ನು ವಿಧಿಸುತ್ತೇನೆ. ಅಲ್ಲಿಯ ವರೆಗೆ ನೀನು ನನ್ನ ಬಳಿಯಲ್ಲಿರಲಿಕ್ಕಾಗದು. ತೀರ್ಥಾಟನ ಮಾಡುತ್ತಿರಬೇಕು. ಹನ್ನೆರಡು ವರುಷಗಳು ಕಳೆದ ನಂತರ ನೀನು ನನ್ನ ಸನ್ನಿಧಿಯನ್ನು ಸೇರಬೇಕು.

ಈ ಪ್ರಕಾರ ಮಹಾರಾಜರು ಮಾತನಾಡಲು ಸಚ್ಚಿದಾನಂದನು ತನ್ನಿಂದಾದ ಅಪರಾಧಕ್ಕೆ ಕ್ಷಮೆಬೇಡಿಕೊಂಡು ಗುರ್ವಾಜ್ಞೆಯಂತೆ ತೀರ್ಥಾಟನಕ್ಕೆ ಹೊರಟು ಹೋದನು.

ಇತ್ತ ಮಹಾರಾಜರು ಒಮ್ಮೆಲೆ ಇಂದೂರಿನಲ್ಲಿ ಪ್ರಕಟರಾದರು. ಒಂದೆರಡು ದಿನಗಳವರೆಗೆ ಸಮಾಧಿಸ್ಥಿತಿಯಲ್ಲಿಯೇ ಕುಳಿತುಕೊಂಡರು. ಹೀಗಿರಲು ಇತ್ತ ಗೋಂದಾವಲಿಯಲ್ಲಿ ರಾವಜೀಪಂತರು ಶ್ರೀರಾಮಚರಣಗಳಲ್ಲಿ ಐಕ್ಯರಾದರು. ಆ ದಿನ ಮಹಾರಾಜರು ಸಮಾಧಿಯನ್ನು ವಿಸರ್ಜಿಸಿ ಮುಂಡನ ಮಾಡಿಸಿಕೊಂಡರು. ಜನರು ಹೀಗೇಕೆಂದು ಕೇಳಲು ನನ್ನ ತಂದೆಯು ಶ್ರೀರಾಮಚರಣಗಳಲ್ಲಿ ಇಂದು ಐಕ್ಯನಾದನು ಎಂದು ಹೇಳಿದರು. ಬಳಿಕ ಮಹಾರಾಜರು ಪಿತೃನಿರ್ಯಾಣ ನಿಮಿತ್ತವಾಗಿ ಬ್ರಾಹ್ಮಣ ಸಮಾರಾಧನೆಯನ್ನಾರಂಭಿಸಿದರು. ಅಸಂಖ್ಯಜನ ಭಕ್ತರು

ಸೇರಿದರು. ನಿತ್ಯೋತ್ಸವವು ನಡೆಯಿತು. ಮಹಾರಾಜರು ತಮ್ಮ ಬೈರಾಗಿಯ ವೇಷವನ್ನು ತ್ಯಜಿಸಿ ರಾಜಯೋಗಿಯ ವೇಷವನ್ನು ಧರಿಸಿದರು. ತಲೆಗೆ ಸುಂದರವಾದ ಗಣೇಶಟೊಪ್ಪಿಗೆಯನ್ನು ಹಾಕಿದರು. ಜರತಾರಿಯ ಕಫನಿಯನ್ನು ತೊಟ್ಟುಕೊಂಡರು. ದ್ವಾದಶನಾಮಗಳನ್ನು ಹಚ್ಚಿದರು. ವೈಷ್ಣವ ಪದ್ಧತಿಯ ತಿಲಕವು ಅವರ ಭಾಲಪ್ರದೇಶದಲ್ಲಿ ಒಪ್ಪತೊಡಗಿತು.

ಇಂದೂರಿನಲ್ಲಿ ಮಹಾರಾಜರ ಕೀರ್ತಿಯು ಬಹಳ ಬೆಳೆಯಿತು. ಅಸಂಖ್ಯ ಜನರು ದರ್ಶನಾರ್ಥವಾಗಿ ಬಂದು ತಮ್ಮ ಇಚ್ಛಿತಗಳನ್ನು ಪೂರ್ಣಪಡಿಸಿಕೊಂಡು ಹೋಗುತ್ತಿದ್ದರು. ಸಮಸ್ತರೂ ರಾಮನಾಮ ಘೋಷವನ್ನು ಮಾಡತೊಡಗಿದರು. ರಾಮಭಕ್ತಿಯ ಪ್ರಸಾರವು ಶುಕ್ಲೇಂದುವಿನಂತೆ ಬೆಳೆಯತೊಡಗಿತು.

## ೧೧ನೆಯ ಅಧ್ಯಾಯ:— ಶ್ರೀರಾಮ ಪ್ರತಿಷ್ಠೆ.

ರಾವಜೀಪಂತರು ಪರಲೋಕವನ್ನೈದಿದ ಬಳಿಕ ಗೀತಾಬಾಯಿಯು ಬಹು ದುಃಖಿತಳಾದಳು. ಮಹಾರಾಜರ ತರುವಾಯ ಆ ಸಾಧ್ವೀಶಿರೋಮಣಿಗೆ ಇನ್ನೊಬ್ಬ ಹೆಣ್ಣುಮಗಳೂ, ಮತ್ತೊಬ್ಬ ಗಂಡುಮಗನೂ ಹುಟ್ಟಿದ್ದರು. ಹೆಣ್ಣುಮಗಳು ದೊಡ್ಡವಳಾಗಿ ಖಾತವಳದಲ್ಲಿರುವ ಪತಿಗೃಹದಲ್ಲಿದ್ದಳು. ಇನ್ನೊಬ್ಬ ಗಂಡು ಹುಡುಗನು ಮಾತ್ರ ಇನ್ನೂ ಚಿಕ್ಕವನಿದ್ದನು; ಅವನಿಗೆ ಅಣ್ಣಾ ಎಂದು ಕರೆಯುತ್ತಿದ್ದರು. ಪ್ರಭುದ್ಧನಾದ ಗಣಪತಿಯು ಮನೆಬಿಟ್ಟು ಹೋದ್ದರಿಂದ ನಮ್ಮ ಸಂಸಾರವು ರಸಾತಳಕ್ಕೆ ಮುಟ್ಟಿತು, ಎಂದು ಆ ಸಾಧ್ವಿಯು ಗೋಳಿಡುತ್ತಿದ್ದಳು. ಅದೇ ಊರಲ್ಲಿ ಗೋಪಾಳರಾಯನೆಂಬೊಬ್ಬ ಗೃಹಸ್ಥನು ರಾವಜೀಪಂತರ ಆಪ್ತನೂ ಬ್ರಹ್ಮಚೈತನ್ಯರ ಬಾಲಸ್ನೇಹಿತನೂ ಆಗಿದ್ದನು. ಆತನು ರಾವಜೀಪಂತರ ಮನೆ

ತನದ ಸ್ಥಿತಿಯನ್ನು ತಿಳಿದು ಬ್ರಹ್ಮಚೈತನ್ಯರನ್ನು ಹುಡುಕಿತರಬೇಕೆಂದು ನಿರ್ಧರಿಸಿದನು. ಅಷ್ಟರಲ್ಲಿ ಇಂದೂರಲ್ಲಿ ದಿಗಂತವಾಗಿ ಹಬ್ಬಿಹರಿಬಿದ್ದ ಅವರ ಕೀರ್ತಿಯು ಆವನ ಕಿವಿಯವರೆಗೆ ಹೋಯಿತು. ಕೂಡಲೆ ಆತನು ಗೀತಾಬಾಯಿಯ ಅಪ್ಪಣೆಪಡೆದು ಇಂದೂರಿಗೆ ಹೋಗಿ ಮಹಾರಾಜರಿಗೆ ಭೆಟ್ಟಿಯಾದನು. ಮತ್ತು ಗೋಂದಾವಲಿಯ ಎಲ್ಲ ಸಂಗತಿಗಳನ್ನು ಹೇಳಿ ಅವರಿಗೆ ತಾಯಿಯ ಸ್ವರೂಪವನ್ನು ತಿಳಿಸಿದನು. ತಾಯಿಯ ಅಪ್ಪಣೆಯಂತೆ ಮಹಾರಾಜರು ಗೋಂದಾವಲಿಗೆ ಹೊರಡಲು ಸಿದ್ಧರಾದರು. ಆದರೆ ಇಂದೂರಿನ ಭಕ್ತರಿಗೆ ಮಹಾರಾಜರ ವಿಯೋಗವು ಸಹನವಾಗದಂತಾಯಿತು. ಅವರು ದೀನಮುಖದಿಂದ ಮಹಾರಾಜರೆದುರಿಗೆ ನಿಂತುಕೊಂಡರು. ಆಗ ಮಹಾರಾಜರು ಅವರನ್ನು ಸಮಾಧಾನಪಡಿಸಿ ಅನೇಕಜನ ಶಿಷ್ಯರೊಡನೆ ಗೋಂದಾವಲಿಗೆ ಹೊರಟರು. ಕೆಲ ದಿನಗಳಲ್ಲಿ ಊರನ್ನು ಮುಟ್ಟಿ ತಾಯಿಗೆ ದಂಡವತ್ ನಮಸ್ಕಾರ ಹಾಕಿದರು. ಆ ಸಾಧ್ವಿಯು ಮಗನನ್ನು ಮುದ್ದಾಡಿ—ಅಪ್ಪಾ, ಇನ್ನು ಮುಂದಾದರೂ ಮನೆಯಲ್ಲಿರು, ಎಂದು ನುಡಿದು ಕಣ್ಣಿಗೆ ನೀರುತಂದಳು. ಆಗ ಮಹಾರಾಜರು ತಾಯಿಗೆ ಜ್ಞಾನಬೋಧವನ್ನು ಮಾಡಿ ಆಕೆಯನ್ನು ಸಮಾಧಾನಗೊಳಿಸಿದರು. ಒಳಿಕ ಮನೆಯ ಎಲ್ಲ ವ್ಯವಹಾರಗಳನ್ನು ಸರಿಯಾಗಿ ನಡೆಸಿದರು. ಸರಸ್ವತೀಬಾಯಿಯು ಬಾತವಳದಲ್ಲಿದ್ದದರಿಂದ ಅಲ್ಲಿಗೆ ಶಿಷ್ಯರನ್ನು ಕಳುಹಿ ಕರೆಯಿಸಿಕೊಂಡರು. ಮೊದಲಿನಂತೆ ಮನೆತನವನ್ನು ನಡಿಸಲಾರಂಭಿಸಿದರು. ಹೀಗೆ ಕೆಲದಿನಗಳು ಕ್ರಮಿಸುತ್ತಿರಲು ಮಹಾರಾಜರ ಚಿಕ್ಕ ತಮ್ಮನು ದೇಹಯಾತ್ರೆಯನ್ನು ಮುಗಿಸಿದನು. ಮುಂದೆ ಸ್ವಲ್ಪದಿವಸಗಳಲ್ಲಿಯೇ ಬಾತವಳದಲ್ಲಿದ್ದ ತಂಗಿಯೂ ಪರಲೋಕವಸ್ಸೈದಿದಳು. ಇಬ್ಬರು ಮಕ್ಕಳು ಮೃತಪಟ್ಟದ್ದರಿಂದ ಗೀತಾಬಾಯಿಗೆ ಬಹಳ ದುಃಖವಾಯಿತು. ಆದರೆ ಮಹಾರಾಜರು ಹತ್ತಿರ ಇದ್ದದರಿಂದ ಆಕೆಯು ಆ ದುಃಖವನ್ನು ಕೂಡಲೆ ಮರೆತುಬಿಟ್ಟಳು.

ಮಹಾರಾಜರು ಪ್ರಪಂಚಮಾಡತೊಡಗಿದ ಕೆಲದಿನಗಳಲ್ಲಿ ಸರಸ್ವತೀಬಾಯಿಯು ಗರ್ಭವತಿಯಾದಳು. ಗುರುಪತ್ನಿಯು ಬಹಳ ದಿವಸಕ್ಕೆ ಗರ್ಭವತಿಯಾದ್ದರಿಂದ ಭಕ್ತರೆಲ್ಲರಿಗೂ ಆನಂದವಾಯಿತು. ಗೀತಾಬಾಯಿಗಂತೂ ಹೇಳಕೂಡದಷ್ಟು ಆನಂದವಾಯಿತು. ಸರಸ್ವತೀಬಾಯಿಯ ಗರ್ಭವು ಶುಕ್ಲೇಂದುವಿನಂತೆ ಬೆಳೆಯಲಾರಂಭಿಸಿತು. ಮಹಾರಾಜರ ಭಕ್ತರು ಆ ಸಾಧ್ವಿಗೆ ಬಗೆಬಗೆಯ ಪಕ್ವಾನ್ನಗಳನ್ನು ಉಣ್ಣಿಸಲಾರಂಭಿಸಿದರು. ಸೀರೆ ಕುಪ್ಪಸಗಳ ಉಡುಗರೆಮಾಡತೊಡಗಿದರು. ಮರುಳ ಜನರು ಹೀಗೇಕೆ ಮಾಡುತ್ತಿರುವರೆಂದು ಮಹಾರಾಜರು ನಗುತ್ತಿದ್ದರು. ಸರಸ್ವತೀಬಾಯಿಯು ವೈರಾಗ್ಯಶೀಲಳಾಗಿದ್ದರೂ ಜನರು ಮಾಡುವ ಆದರವನ್ನು ಪ್ರೇಮದಿಂದ ಸ್ವೀಕರಿಸುತ್ತಿದ್ದಳು. ಎಲ್ಲವೂ ಶ್ರೀರಾಮನ ಇಚ್ಛೆಯಿಂದೇ ಆ ಸತಿಯು ಭಾವಿಸಿದ್ದಳು. ಹೀಗಿರುತ್ತಿರಲು ನವಮಾಸಗಳು ತುಂಬಿದವು. ಸರಸ್ವತೀಬಾಯಿಯು ಪುತ್ರರತ್ನವನ್ನು ಹೆತ್ತಳು. ಭಕ್ತರಲ್ಲಿ ಆನಂದವು ಹೆಚ್ಚಿತು. ಗೀತಾಬಾಯಿಯು ಮೊಮ್ಮಗನ ಮುಖವನ್ನು ನೋಡಿ ಸಂತೋಷಪಟ್ಟಳು. ಮಗುವನ್ನು ತೊಟ್ಟಿಲಲ್ಲಿ ಹಾಕುವ ಸಮಾರಂಭವನ್ನು ಬಹು ವಿಜೃಂಭಣೆಯಿಂದ ನೆರವೇರಿಸಬೇಕೆಂದು ಭಕ್ತರು ಸಿದ್ಧತೆಯನ್ನು ನಡಿಸಿದರು. ಆಗ ಮಹಾರಾಜರು ಭಕ್ತರನ್ನು ಕುರಿತು—ತಮ್ಮಗಳಿರಾ, ಯಾತಕ್ಕೋಸ್ಕರ ಇಷ್ಟು ಉತ್ಸವವನ್ನು ಮಾಡುವಿರಿ? ಹುಟ್ಟಿದ ಶಿಶುವು ಅಲ್ಪಾಯುವಿರುವದು ಎಂದು ನುಡಿದು ಅವರ ಉತ್ಸಾಹಕ್ಕೆ ಭಂಗವನ್ನು ತಂದರು. ಮಹಾರಾಜರಿಗೆ ಇಷ್ಟವಿಲ್ಲವೆಂದು ತಿಳಿದು ಭಕ್ತರು ಆ ಉತ್ಸವವನ್ನು ಮಾಡಲಿಲ್ಲ. ಮುಂದೆ ಆ ಶಿಶುವು ಒಂದು ವರುಷ ತುಂಬುವಷ್ಟರಲ್ಲಿಯೇ ಪರಲೋಕವನ್ನೈದಿತು. ಕೂಸು ಸತ್ತ ಸ್ವಲ್ಪ ದಿನಗಳಲ್ಲಿಯೇ ಸರಸ್ವತೀಬಾಯಿಯೂ ಪತಿಚರಣಗಳಲ್ಲಿ ಐಕ್ಯಳಾದಳು.

ಸೊಸೆಯ ನಿಯರ್ಾಣದಿಂದ ಗೀತಾಬಾಯಿಗೆ ಬಹಳ ವ್ಯಸನವಾಯಿತು. ಆಕೆಯು ಮಗನನ್ನು ಕುರಿತು ಎರಡನೇ ಲಗ್ನ ಮಾಡಿಕೊ

ಳ್ಳೆಂದು ದುಂಬಾಲಬಿದ್ದಳು. ಸಾಂಸಾರಿಕರಿಗೆ ಎಷ್ಟು ಮಾಡಿದರೂ ಸಂಸಾರದ ಆಶೆಯು ತೀರುವದಿಲ್ಲ. ಸಂಸಾರದ ಮೋಹವು ಅಷ್ಟೊಂದು ಘನತರವಾದ್ದಾಗಿರುವದರಿಂದಲೇ ಮನುಷ್ಯರೂ ಬಳಲುವರು. ಆದರೆ ಜ್ಞಾನಿಗಳು ಮಾತ್ರ ಆ ಮೋಹಕ್ಕೆ ಬೀಳುವದಿಲ್ಲ. ಗೀತಾಬಾಯಿಯು ಹೇಳಿದಾಗೆಲ್ಲ ಮಹಾರಾಜರು ನೋಡೋಣ ನೋಡೋಣ, ಎಂದು ಹೇಳುತ್ತಲೇ ಬರುತ್ತಿದ್ದರು. ಒಂದು ದಿನ ಗೀತಾಬಾಯಿಯು ಗಟ್ಟಿಗೆ ಹಚ್ಚಿದಳು. ಮಹಾರಾಜರು ಏನು ನೆವ ಹೇಳಿದರೂ ಆ ಸಾಧ್ವಿಯು ಕೇಳದಾದಳು. ಆಗ ಮಹಾರಾಜರು— ತಾಯಿ, ಚಿಂತಿಸಬೇಡ; ನಾನು ಎರಡನೇ ಲಗ್ನವನ್ನು ಮಾಡಿಕೊಳ್ಳುವೆನು; ಆದರೆ ನಾನೇ ಸ್ವತಃ ಕನ್ಯೆಯನ್ನು ನೋಡಿ ಮಾಡಿಕೊಳ್ಳಬೇಕಾದ್ದರಿಂದ ಕೆಲಸ ತಡವಾಗುವದು. ಎಂದು ಹೇಳಿದರು. ಗೀತಾಬಾಯಿಗೆ ಸಮಾಧಾನವಾಯಿತು.

ಮಹಾರಾಜರು ಒಮ್ಮೆ ಆಟಪಾಡಿ ಮಹಾಲಿಗೆ ಹೋದರು. ಅಲ್ಲಿ ಸಖಾರಾಮಪಂತ ದೇಶಪಾಂಡೆ ಎಂಬ ಒಬ್ಬ ಗೃಹಸ್ಥನಿದ್ದನು. ಆತನಿಗೆ ಎರಡೂ ಕಣ್ಣುಗಳಿಲ್ಲದ ಒಬ್ಬ ಮಗಳಿದ್ದಳು. ಆಕೆಯು ಉಪವರಳಾದ್ದರಿಂದ ಸಖಾರಾಮಪಂತನು ಮಗಳನ್ನು ಯಾರು ಮಾಡಿಕೊಳ್ಳುವರೆಂದು ಹಗಲಿರುಳೂ ಚಿಂತಿಸುತ್ತಿದ್ದನು. ಮಹಾರಾಜರು ಅವರ ಮನೆಗೇ ಕನ್ಯಾರ್ಥಿಗಳಾಗಿ ಹೋದರು. ಊರಲ್ಲಿ ಸುಲಕ್ಷಣವಾದ ಉಪವರ ಕನ್ಯೆಗಳು ಬಹಳಿದ್ದವು. ಮಹಾರಾಜರಂಥ ಲೋಕೋತ್ತರ ಸಾಧುಪುರುಷರಿಗೆ ಕನ್ಯೆಕೊಡದವರಾರು? ಇಂಥ ಸತ್ಪಾತ್ರಕ್ಕೆ ಕನ್ಯಾದಾನಮಾಡಿ ಕುಲಕೋಟಿಯನ್ನುದ್ಧರಿಸಬೇಕೆಂದು ಬಹು ಜನರು ಹಾತೊರೆಯುತ್ತಿದ್ದರು. ಆದರೆ ಮಹಾರಾಜರು ಯಾರ ಪ್ರಾರ್ಥನೆಯನ್ನೂ ಮನ್ನಿಸಲಿಲ್ಲ. ಸಖಾರಾಮಪಂತನ ಮನೆಗೆ ಹೋಗಿ ಆತನ ಕುರುಡ ಮಗಳನ್ನು ಯಾಚಿಸಿದರು. ಮಹಾರಾಜರಂಥ ಸತ್ಪುರುಷರಿಗೆ ಕುರುಡ ಮಗಳನ್ನು ಹ್ಯಾಗೆ ಕನ್ಯಾದಾನಮಾಡಿಕೊಡಬೇಕೆಂದು ಆತನು ಬಹಳವಾಗಿ ಚಿಂತಿಸಿದನು.

ಆದರೆ ಮಹಾರಾಜರು ಆಕೆಯನ್ನೇ ಲಗ್ನವಾಗುವೆನೆಂದು, ಖಂಡಿತವಾಗಿ ಹೇಳಿಬಿಟ್ಟಿದ್ದರಿಂದ ಸಖಾರಾಮಪಂತನು ಒಂದು ಬಗೆಯಿಂದ ಆನಂದಭರಿತನಾದನು. ಮಗಳನ್ನು ಯಾರು ಮದುವೆಯಾಗುವರೋ ಎಂಬ ಚಿಂತೆಯಿಂದ ಒಳಬುತ್ತಿದ್ದ ಆತನು ಮಗಳು ಲೋಕಪೂಜ್ಯರ ಪದರಿನಲ್ಲಿ ಬೀಳುವಳೆಂ ಸಂಗತಿಯಿಂದ ಆತನಿಗೆ ಎಷ್ಟು ಆನಂದವಾಗಬೇಡ! ಆತನು ತನ್ನ ವೈಭವಾನುಸಾರವಾಗಿ ಮದುವೆಯ ಸಿದ್ಧತೆಯನ್ನು ಮಾಡಿದನು. ಅಟಪಾಡಿಯಲ್ಲಿಯೇ ಲಗ್ನಮಹೋತ್ಸವವು ಜರುಗಿತು. ವಧುವು ಹುಟ್ಟು ಕುರುಡಿಯಾಗಿದ್ದರೂ ಏನು ಧನ್ಯಳೆಂದು ಜನರು ಕೊಂಡಾಡಲಾರಂಭಿಸಿದರು. ವಧುವಿನ ಹೆಸರು ತವರು ಮನೆಯಲ್ಲಿ ಯಮುನಾಬಾಯಿ ಎಂದಿತ್ತು. ಆದರೆ ಮಹಾರಾಜರು ಪಾಣಿಗ್ರಹಣಮಾಡಿದ ಮೇಲೆ ತಮ್ಮ ಮೊದಲನೇ ಹೆಂಡತಿಯ ಹೆಸರಾದ ಸರಸ್ವತಿ ಎಂಬ ಹೆಸರನ್ನೇ ಆಕೆಗಿಟ್ಟರು. ನಾಲ್ಕು ದಿನಗಳವರೆಗೆ ಲಗ್ನಮಹೋತ್ಸವವು ಜರುಗಿತು. ಮಹಾರಾಜರ ಈ ಲಗ್ನಸಮಾರಂಭವನ್ನು ಕಣ್ಣುಟ್ಟನೋಡಿ ಸದ್ಭಕ್ತರು ಸಂತೋಷವನ್ನು ಹೊಂದಿದರು.

ಇಂತು ಮಹಾರಾಜರು ದ್ವಿತೀಯ ಪತ್ನಿಯ ಪಾಣಿಗ್ರಹಣ ಮಾಡಿ ಹೆಂಡತಿಯೊಡನೆ ಗೊಂದಾವಲೆಗೆ ಬಂದು ತಾಯಿಗೆ ಸಾಷ್ಟಾಂಗವಾಗಿ ನಮಸ್ಕರಿಸಿದರು. ಸೊಸೆಯು ಕುರುಡಿಯಾಗಿದ್ದರೂ ಮಗನು ಮತ್ತೆ ಲಗ್ನವಾದನೆಂಬ ಸಂತೋಷದಿಂದ ಗೀತಾಬಾಯಿಯು ಸಮಾಧಾನವನ್ನು ತಾಳಿದಳು.

ಈ ಪ್ರಕಾರ ಮಹಾರಾಜರು ಪುನಃ ಗೃಹಸ್ಥಾಶ್ರಮವನ್ನು ತಾಳಿ, 'ಧನ್ಯೋಗೃಹಸ್ಥಾಶ್ರಮಃ'' ಎಂಬುದನ್ನು ಜಗತ್ತಿಗೆ ತೋರಿಸಿಕೊಡುವದಕ್ಕಾಗಿ ಸಂಸಾರವನ್ನು ಮಾಡ ತೊಡಗಿದರು. ಹೀಗೆ ಕೆಲವು ದಿನಗಳು ಕ್ರಮಿಸುತ್ತಿರಲು ಗೋಂದಾವಲಿಯಲ್ಲಿ ಉಪಾಸನಾವೃದ್ಧ್ಯರ್ಥವಾಗಿ ಒಂದು ಸುಂದರವಾದ ರಾಮಮಂದಿರವನ್ನು ಕಟ್ಟಿಸಬೇಕೆಂದು ಯೋಚಿ

ಸಿದರು. ಮಹಾತ್ಮರ ಮನಸ್ಸಿಗೆ ಬಂದರೆ ಯಾವ ಕಾರ್ಯಗಳು ಆಗಲಿಕ್ಕಿಲ್ಲ! ಶ್ರೀರಾಮಮಂದಿರಕ್ಕಾಗಿ ಅಪಾರ ದ್ರವ್ಯವನ್ನು ಸಂಗ್ರಹಿಸಿದರು. ಭಕ್ತರು ಬೇಡಿದಷ್ಟು ದ್ರವ್ಯವನ್ನು ಸಮರ್ಪಿಸಿ ತಮ್ಮ ಔದಾರ್ಯವನ್ನು ವ್ಯಕ್ತಪಡಿಸಿದರು! ಸುಂದರವಾದ ಮಂದಿರವು ನಿರ್ಮಾಣವಾಯಿತು. ಮಹಾರಾಜರು ತಾವು ಹಿಂದಕ್ಕೆ ತಂದಿಟ್ಟ ತಡವಲದಲ್ಲಿಯ ಮೂರ್ತಿಗಳನ್ನು ಸೇವಕರಿಂದ ತರಿಸಿದರು. ಶ್ರೀರಾಮ-ಲಕ್ಷ್ಮಣ-ಸೀತಾ-ಮಾರುತಿ ಈ ನಾಲ್ಕೂ ಮೂರ್ತಿಗಳು ಸರ್ವೋತ್ಕೃಷ್ಟವಾಗಿದ್ದವು. ಅವು ಮೂರ್ತಿಗಳಲ್ಲ; ಪ್ರತ್ಯಕ್ಷ ದೇವರೇ ಬಂದಿರುವರೆಂದು ಜನರಿಗೆ ಭಾಸವಾಗುವಂತಿತ್ತು. ಶಾಲಿವಾಹನ ಶಕೆ ೧೮೧೩ರಲ್ಲಿ ಮಂದಿರದ ಕೆಲಸವು ನೆರವೇರಿತು. ಬಳಿಕ ಮಹಾರಾಜರು ವೈದಿಕಪಂಡಿತರನ್ನು ಕೂಡಿಸಿ ಶ್ರೀರಾಮಪ್ರತಿಷ್ಠೆಯನ್ನು ಮಾಡಿಸಿದರು. ಶ್ರೀರಾಮ-ಲಕ್ಷ್ಮಣ-ಸೀತಾ ಈ ಮೂರು ಮೂರ್ತಿಗಳು ಸಿಂಹಾಸನದಮೇಲೆ ವಿರಾಜಮಾನವಾದವು. ಒಮ್ಮೆ ಮಹಾರಾಜರು ಭಜನೆ ಮಾಡುತ್ತ ನಿಂತಾಗ ಮೂರ್ತಿಯ ತುರಾಯದಲ್ಲಿದ್ದ ಗುಲಾಬಿಯ ಹೂವು ಮಹಾರಾಜರ ಕೈಯಲ್ಲಿ ಬಂದು ಬಿತ್ತು. ಜನರೆಲ್ಲರೂ ಆಶ್ಚರ್ಯಚಕಿತರಾದರು. ಮತ್ತೊಮ್ಮೆ ಮಹಾರಾಜರು ಕಾಶಿಗೆ ಹೋಗಬೇಕೆಂದು ಹೊರಡಲು ಮೂರ್ತಿಯ ಕಣ್ಣೊಳಗಿಂದ ನೀರು ಬಂದವು. ಮಹಾರಾಜರು ಹೋಗುವದಿಲ್ಲೆಂದು ನುಡಿಯಲು ನೀರು ಬರುವದು ಬಂದಾಯಿತು. ಈ ಬಗೆಯ ಹಲವು ಚಮತ್ಕಾರಗಳಿಂದ ಶ್ರೀರಾಮನು ಇಲ್ಲಿ ಪ್ರತ್ಯಕ್ಷನಾಗಿರುವನೆಂಬದನ್ನು ಮಹಾರಾಜರು ತೋರಿಸಿಕೊಟ್ಟರು. ಮಂದಿರದ ಪ್ರತಿಷ್ಠಾಪನೆಯಾದಂದಿನಿಂದ ಉಪಾಸನಾ ಧರ್ಮವು ವಿಶೇಷವಾಗಿ ಬೆಳೆಯಿತು. ರಾಮನಾಮದ ಗರ್ಜನೆಯು ಜನರನ್ನು ಪವಿತ್ರರನ್ನಾಗಮಾಡತೊಡಗಿತು.

## ೧೨ನೆಯ ಅಧ್ಯಾಯ:— ತಾಯಿಗೋಸ್ಕರ ಮಾಡಿದ ಕಾಶೀಯಾತ್ರೆ.

ಮಹಾರಾಜರು ಶ್ರೀರಾಮ ಮಂದಿರವನ್ನು ಸ್ಥಾಪಿಸಿ ಉಪಾಸನಾ ಧರ್ಮವನ್ನು ಪ್ರಕಟಿಸುತ್ತಿರಲು, ಗೀತಾಬಾಯಿಯು ಒಂದು ದಿನ ಮಗನನ್ನು ಕುರಿತು—ಅಪ್ಪಾ, ನನ್ನ ಮನಸ್ಸಿನಲ್ಲಿ ಕಾಶೀಯಾತ್ರೆಯನ್ನು ಮಾಡಬೇಕೆಂದಿದೆ, ಕರೆದುಕೊಂಡು ಹೋಗುವಿಯಾ? ಎಂದು ಕೇಳಿದಳು. ತಾಯಿಯ ಇಚ್ಛೆಯನ್ನು ಪೂರೈಸುವದಕ್ಕೆ ಮಹಾರಾಜರು ಎರಡು ಲಗ್ನಗಳನ್ನು ಮಾಡಿಕೊಂಡಿದ್ದರೆಂದಬಳಿಕ ಕಾಶೀಯಾತ್ರೆಯನ್ನು ಮಾಡಿಸುವದಕ್ಕೆ ಅವರು ನಿರಾಕರಿಸಬಹುದೇ? ಕೂಡಲೆ ಒಪ್ಪಿಕೊಂಡು ಕಾಶಿಗೆ ಹೊರಡುವ ಸಿದ್ಧತೆಯನ್ನು ನಡಿಸಿದರು. ದೂರಿನ ಪ್ರವಾಸವಾದ್ದರಿಂದ ಹೆಂಡತಿಯನ್ನು ತವರು ಮನೆಗೆ ಕಳಿಸಿದರು. ಹಾಗು ಮನೆಯ ಮೇಲೆ ತುಳಸೀಪತ್ರವನ್ನಿಟ್ಟು ಅದರಲ್ಲಿಯ ಪದಾರ್ಥಗಳನ್ನು ಒಯ್ಯಲು ಬ್ರಾಹ್ಮಣರಿಗೆ ಹೇಳಿದರು. ಹೀಗೆ ಮನೆಯೊಳಗಿನ ಎಲ್ಲ ಪದಾರ್ಥಗಳನ್ನು ದಾನ ಮಾಡಿ ತಾಯಿಗೆ ಮನೆಯ ಕಡೆಗೆ ಚಿಂತೆಯಿಲ್ಲದಂತೆ ಮಾಡಿದರು. ಯಾತ್ರೆಗೆ ಹೋಗುವವರು ಹೀಗೆ ಮನೆಯನ್ನು ದಾನಮಾಡಿ ಹೋಗದಿದ್ದರೂ ಮನೆಯ ಮೇಲಿನ ಚಿಂತೆಯನ್ನು ತೊರೆದು ಕೇವಲ ದೇವರ ಮೇಲಿನ ಚಿಂತೆಯನ್ನೇ ಹಿಡಿದು ಹೋಗಬೇಕೆಂಬ ಧರ್ಮವನ್ನು ತೋರಿಸುವದಕ್ಕಾಗಿ ಮಹಾರಾಜರು ಹೀಗೆ ಮಾಡಿದರು. ಬಳಿಕ ಅವರು ಕಾಶೀಯಾತ್ರೆಗೆ ಹೊರಟರು. ಸಂಗಡ ಅಸಂಖ್ಯಜನ ಶಿಷ್ಯರೂ ಹೊರಟರು. ಕಾಶಿಯನ್ನು ಮುಟ್ಟಿ ವಿಧ್ಯುಕ್ತವಾಗಿ ಕ್ಷೇತ್ರವಿಧಿಯನ್ನು ಮಾಡಿದರು. ಮತ್ತು ತಾಯಿಯ ಕಯ್ಯಿಂದ ಹೇರಳವಾಗಿ ದಾನ-ಧರ್ಮಗಳನ್ನು ಕೊಡಿಸಿದರು. ಬಳಿಕ ಅವರು ಗಯಾಕ್ಷೇತ್ರಕ್ಕೆ ಹೋಗಿ ಶ್ರೀ ವಿಷ್ಣುಪಾದದ ಮೇಲೆ ಪಿತೃಗಳಿಗೆ ಪಿಂಡವನ್ನು ಕೊಟ್ಟರು. ಇವರು

ಕಾಶಿಯಲ್ಲಿಯೂ ಗಯೆಯಲ್ಲಿಯೂ ಮಾಡಿದ ದಾನ-ಧರ್ಮದ ಲೆಕ್ಕವನ್ನು ಮಾಡುವದೇ ಅಶಕ್ಯವು. ಯಾರ ಮುಂದೆ ಅಷ್ಟಸಿದ್ಧಿಗಳು ಕೈಮುಗಿದು ಕೊಂಡು ನಿಂತಿವೆಯೋ ಅಂಥವರಿಗೆ ಕೊರತೆಯಾತರದು? ಇಂಥ ಮಹಾ ಮಹಿಮರು ಕೇವಲ ನಿಮಿತ್ತಕ್ಕಾಗಿ ಜನರಿಂದ ಭಿಕ್ಷೆಗ್ರಹಣಮಾಡುವರು. ಕೇವಲ ದರಿದ್ರನನ್ನು ವೈಭವಸಂಪನ್ನನನ್ನಾಗಮಾಡಲಿಕ್ಕೆ ಯಾರು ಸಮರ್ಥರೋ ಅಂಥವರು ಭಕ್ತರಲ್ಲಿ ಭಿಕ್ಷೆ ಬೇಡುವದೆಂದರೆ, ಯಾವ ಉದ್ದೇಶದಿಂದ ಎಂಬುದನ್ನು ವಾಚಕರೇ ಊಹಿಸತಕ್ಕದ್ದು; ಸಜ್ಜನರು ಮನೆಗೆ ಭಿಕ್ಷೆಗೆ ಬಂದಾಗ ಇಲ್ಲದ ಪೌಲು ತೋರಿಸುವವರು ಈ ಮಾತಿನ ರಹಸ್ಯವನ್ನು ತಿಳಿದುಕೊಳ್ಳಬೇಕು. ಇರಲಿ, ಮಹಾರಾಜರು ತಾಯಿಯ ಮನಸ್ಸು ತೃಪ್ತವಾಗುವಂತೆ ಆಕೆಯ ಕೈಯಿಂದ ದಾನಧರ್ಮಗಳನ್ನು ಮಾಡಿಸಿ ಅಯೋಧ್ಯೆಗೆ ಬಂದರು. ಕಾಶಿಯಲ್ಲಿಯೂ, ಗಯೆಯಲ್ಲಿಯೂ ಎಷ್ಟೋ ಜನರು ಮಹಾರಾಜರಿಗೆ ಶರಣು ಬಂದರು. ಹಲವು ಜನ ಪಾಖಂಡಿಗಳು ಮಹಾರಾಜರ ಸದುಪದೇಶದಿಂದ ರಾಮಭಜನೆ ಮಾಡಲಾರಂಭಿಸಿದರು. ಕಲಿಯುಗದಲ್ಲಿ ನಾಮಸ್ಮರಣೆಯೊಂದೇ ತಾರಕವೆಂಬುದನ್ನು ಸಕಲ ಜನರಿಗೂ ತಿಳಿಸಿಕೊಟ್ಟರು. ಕರ್ಮಠರೂ, ಬಾಷ್ಕಳ ವೇದಾಂತಿಗಳೂ ಮಹಾರಾಜರ ನಿರೂಪಣದ ಮುಂದೆ ಹತಾಶರಾಗಿ ಅವರಿಗೆ ಶರಣು ಬಂದರು.

ಅಯೋಧ್ಯೆಯಲ್ಲಿ ಮಹಾರಾಜರು ಕೆಲದಿನ ವಾಸಿಸಿದರು. ಆ ಅಯೋಧ್ಯೆಯ ಪುಣ್ಯಕ್ಷೇತ್ರವನ್ನು ನೋಡಿ ಗೀತಾಬಾಯಿಗೆ ತುಂಬಾ ಸಂತೋಷವಾಯಿತು. ಅಯೋಧ್ಯೆಯು ಶ್ರೀರಾಮನ ಜನ್ಮಭೂಮಿಯೆಂಬದನ್ನೂ, ಶ್ರೀರಾಮನು ಆಟವಾಡಿದ ಸ್ಥಳವೆಂಬದನ್ನೂ ತಿಳಿದು ಆ ಮಹಾತಾಯಿಗೆ ಬಹು ಸಂತೋಷವಾಯಿತು. ಅಯೋಧ್ಯೆಯಲ್ಲಿಯೇ ತಾಯಿಯ ದೇಹಾವಸಾನವಾಗುವದೆಂಬುದು ಮಹಾರಾಜರಿಗೆ ಗೊತ್ತಿತ್ತು. ಆದ್ದರಿಂದ ಅವರು ಆ ಕಾಲವು ಸಮೀಪಿಸುವ ವರೆಗೆ ಅಲ್ಲಿಯೇ ವಾಸ ಮಾಡಿದರು. ಕೆಲ ದಿನಗಳ ಮೇಲೆ ಗೀತಾಬಾಯಿಯ ಪ್ರಕೃತಿಯು ಅಸ್ವಸ್ಥವಾ

ಹಾಯಿತು, ಮಹಾರಾಜರು ತಾಯಿಗೆ ಜ್ಞಾನೋಪದೇಶವನ್ನು ಮಾಡಿ ಆಕೆಯಲ್ಲಿ ಪೂರ್ಣ ಸಮಾಧಾನವುಂಟಾಗುವಂತೆ ಮಾಡಿದರು. ಆ ಅಸ್ವಸ್ಥತೆಯು ಹೆಚ್ಚಾಗಿ ಒಂದು ದಿನ ಆ ಮಹಾಸಾಧ್ವಿಯು ಶ್ರೀರಾಮಚರಣಗಳಲ್ಲಿ ಐಕ್ಯಳಾದಳು. ಬಳಿಕ ಮಹಾರಾಜರು ಪುತ್ರಧರ್ಮಾನುಸಾರವಾಗಿ ಆಕೆಯ ಔರ್ಧ್ವದೇಹಿಕ ಕಾರ್ಯಗಳನ್ನು ನೆರವೇರಿಸಿದರು. ಅಸಂಖ್ಯ ದಾನ-ಧರ್ಮಗಳನ್ನು ಕೊಟ್ಟರು. ಬ್ರಾಹ್ಮಣಸಂತರ್ಪಣೆಯನ್ನಂತೂ ಮಿತಿಯಿಲ್ಲದೆ ಮಾಡಿಸಿದರು.

ತಾಯಿಯ ಔರ್ಧ್ವದೇಹಿಕ ಕಾರ್ಯಗಳು ಮುಗಿದ ಬಳಿಕ ಮಹಾರಾಜರು ಅಯೋಧ್ಯೆಯನ್ನು ಬಿಟ್ಟರು. ಮತ್ತು ಸಂಗಡಿಗರೆಲ್ಲರಿಗೂ ಗೋಂದಾವಲಿಗೆ ಹೋಗಬೇಕೆಂದು ಅಪ್ಪಣೆ ಮಾಡಿ ತಾವು ನೈಮಿಷಾರಣ್ಯಕ್ಕೆ ಪ್ರಯಾಣ ಮಾಡಿದರು. ಅಲ್ಲಿ ಸದ್ಗುರು ತುಕಾರಾಮ ಮಹಾರಾಜರ ದರ್ಶನವನ್ನು ಹೊಂದಿ ಪುನಃ ಅಯೋಧ್ಯೆಗೆ ಬಂದರು. ಕೆಲದಿನ ಅಲ್ಲಿ ನಿಂತು ಬಳಿಕ ಗೋಂದಾವಲಿಗೆ ಹೋದರು. ನಾಮಮಹಾತ್ಮೆಯನ್ನು ಬೆಳೆಸುವದಕ್ಕಾಗಿಯೂ ಭಕ್ತರನ್ನು ಉದ್ಧರಿಸುವದಕ್ಕಾಗಿಯೂ ಗೋಂದಾವಲಿಯಲ್ಲಿಯೇ ನಿಂತರು.

---

## ೧೩ನೆಯ ಅಧ್ಯಾಯ:—ಶಿಷ್ಯ ಸಮುದಾಯ.

ಮಹಾರಾಜರ ಕೀರ್ತಿಯು ಹೆಚ್ಚು ಹೆಚ್ಚಾದಂತೆ ಅಸಂಖ್ಯ ಜನರು ಅವರ ಸೇವೆಗಾಗಿ ಬಂದು ನಿಂತರು. ಸದ್ಗುರುವಿಗೆ ಸ್ನಾನಮಾಡಿಸುವದು, ಪಾದಸೇವೆ ಮಾಡುವದು, ಬೀಸಣಿಕೆಗಳನ್ನು ಬೀಸುವದು ಇವೇ ಮೊದಲಾದ ಸೇವೆಯನ್ನು ಅಸಂಖ್ಯ ಜನರು ಮಾಡಲಾರಂಭಿಸಿದರು. ಕೆಲವರು ಗುರುಗೃಹದಲ್ಲಿ ಕುಟ್ಟೋಣ, ಬೀಸೋಣ, ಮೊದಲಾದ ಕೆಲಸ ಮಾಡುತ್ತಿದ್ದರು. ಕೆಲವರು ಅಡಿಗೆ-ನೀರು ಮೊದಲಾದ ಕಾರ್ಯಗಳಲ್ಲಿ ಆಸಕ್ತ

ರಾಗಿದ್ದರು. ಕೆಲವರು ಎಂಜಲ ಗೋಮಯ ಮೊದಲಾದ ನೀಚ ಸೇವೆಗಳಲ್ಲಿ ತತ್ಪರರಾಗಿದ್ದರು. ಹೀಗೆ ಹಲವರು ಹಲವು ಬಗೆಯ ಸೇವೆಯನ್ನು ಮಾಡುತ್ತ, ತಮ್ಮ ದೇಹಸಾರ್ಥಕ್ಯವನ್ನು ಮಾಡಿಕೊಳ್ಳುತ್ತಿದ್ದರು. ಸದ್ಗುರುಸೇವೆಯಲ್ಲಿ ದೇಹದಂಡನ, ಶುದ್ಧಮನಸ್ಸು, ಏಕನಿಷ್ಠೆ ಇವೇ ಮೊದಲಾದವುಗಳು ಮುಖ್ಯವಾದ್ದರಿಂದ, ಇವುಗಳನ್ನು ಯಾರು ಯಾರು ಎಷ್ಟರಮಟ್ಟಿಗೆ ಆಶ್ರಯಿಸಿದ್ದರೋ, ಅಷ್ಟಷ್ಟರಮಟ್ಟಿಗೆ ಅವರಿಗೆ ಫಲವು ಸಿಗುವದು. ಸದ್ಗುರುವಿನ ಅನುಗ್ರಹವು ಏಕನಿಷ್ಠೆಯ ಸೇವೆಯನ್ನು ಅವಲಂಬಿಸಿರುತ್ತದೆಯೇ ಹೊರತು, ಬೇರೆ ಏನನ್ನೂ ಅವಲಂಬಿಸಿರುವದಿಲ್ಲ. ಬಹು ದಿವಸ ಸದ್ಗುರು ಸನ್ನಿಧಿಯಲ್ಲಿದ್ದಮಾತ್ರದಿಂದ ಅನುಗ್ರಹವಾಗುವದೆಂದು ಯಾರೂ ತಿಳಿಯಬಾರದು. ಪರಮ ಪವಿತ್ರವಾದ ಭಾಗೀರಥಿಯು ಹರಿಯುತ್ತಿರುವಾಗ ಕೆಲವರು ಕೊಡಗಳನ್ನು ತುಂಬುವರು; ಕೆಲವರು ತಂಬಿಗೆಗಳನ್ನು ತುಂಬಿಕೊಳ್ಳುವರು; ಕೆಲವರು ಗಿಂಡಿ-ತಾಲಿಗಳಲ್ಲಿ ತುಂಬಿಕೊಳ್ಳುವರು. ತಮತಮಗೆ ಅನುಕೂಲವಾದಂತೆ ಜನರು ಹ್ಯಾಗೆ ಗಂಗಾಜಲವನ್ನು ತುಂಬಿಕೊಳ್ಳುವರೋ, ಹಾಗೆ ಸದ್ಗುರು ಸೇವೆಗೆ ಬಂದ ಜನರು ತಮ್ಮಲ್ಲಿ ಯೋಗ್ಯತೆಯಿದ್ದಷ್ಟರಮಟ್ಟಿಗೆ ಸದ್ಗುರುಸೇವೆಯನ್ನು ಮಾಡಿ, ಪುಣ್ಯವನ್ನು ಪದರಿನಲ್ಲಿ ಕಟ್ಟಿಕೊಳ್ಳುವರು. ಆದರೆ ಹೇಳತಕ್ಕ ಮುಖ್ಯಾಂಶವೇನಂದರೆ, ಸದ್ಗುರು ಸೇವೆಗೆ ಬಂದ ಎಲ್ಲ ಜನರೂ ಅದೇ ಜನ್ಮದಲ್ಲಿ ಉದ್ಧೃತರಾಗದಿದ್ದರೂ, ಕಾಲಾಂತರದಿಂದ ಉದ್ಧೃತರಾಗಿಯೇ ತೀರುವರು. ಕೆಲವು ಜನ ಅಧಿಕಾರಸಂಪನ್ನರು ಮಾತ್ರ ಅದೇ ಜನ್ಮದಲ್ಲಿಯೇ ಉದ್ಧೃತರಾಗಿ, ಲೋಕಪೂಜ್ಯರಾಗುವರು. ಇಂಥ ಪುಣ್ಯವಂತರು ಸಿಗುವದು ಕೇವಲ ವಿರಲ.

ಬ್ರಹ್ಮಚೈತನ್ಯ ಮಹಾರಾಜರ ಸೇವೆಗೆ ಬಂದ ಜನರಲ್ಲಿ ಅಧಿಕಾರಿಸಂಪನ್ನರಾದವರು ಒಬ್ಬಿಬ್ಬರು ಮಾತ್ರ ಇದ್ದರು. ಉಳಿದವರು ಮಂದಾಧಿಕಾರಿಗಳಿದ್ದರು. ಇಂಥ ಅಧಿಕಾರ ಸಂಪನ್ನ ಶಿಷ್ಯರಲ್ಲಿ ಶ್ರೀಬ್ರಹ್ಮ

ನಂದರು ಮೊದಲನೆಯವರು. ಇವರ ಮೂಲ ಹೆಸರು ಅನಂತಭಟ್ಟ ರೆಂದಿತ್ತು. ಇವರು ಕರ್ನಾಟಕ ನಿವಾಸಿಗಳು. ಅದರಲ್ಲೂ ಧಾರವಾಡ ಜಿಲ್ಲೆಯವರು. ಇವರು ಚಿಕ್ಕಂದಿನಲ್ಲಿಯೇ ಮನೆ-ಮಾರುಗಳನ್ನು ತೊರೆದು ಗದಗಿನಲ್ಲಿರುವ ತ್ರಿಕೂಟೇಶ್ವರನ ಸೇವೆಯನ್ನು ಮಾಡಿದರು. ಬಳಿಕ ಅವರು ಗದಗಿನ ಸೆರೆಯಲ್ಲಿದ್ದ ವೆಂಕಟಾಪುರವೆಂಬಲ್ಲಿ ಬಹುದಿವಸ ತಪಶ್ಚರ್ಯೆ ಮಾಡಿದರು. ಈ ವೇಂಕಟಾಪುರವು ಭೂವೈಕುಂಠವೆನಿಸುವದು. ಇಲ್ಲಿ ಶ್ರೀವೆಂಕಟಪತಿಯು ಸ್ವಯಂಭೂವಾಗಿ ಒಡಮೂಡಿರುವನು. ಇಂಥ ಪವಿತ್ರ ಕ್ಷೇತ್ರದಲ್ಲಿ ಅನಂತಭಟ್ಟರು ತಪಶ್ಚರ್ಯೆಗೈಯಲು ಅವರ ತಪಸ್ಸಿಗೆ ಶ್ರೀಲಕ್ಷ್ಮೀಪತಿಯು ಒಲಿದು—"ತಮ್ಮಾ, ನೀನು ಉತ್ತರ ಸೀಮೆಗೆ ಹೋಗು; ಅಲ್ಲಿ ನಿನಗೆ ಸದ್ಗುರುವು ಪ್ರಾಪ್ತನಾಗುವನು." ಎಂದು ದೃಷ್ಟಾಂತಮುಖಾಂತರವಾಗಿ ತಿಳಿಸಿದನು. ಅನಂತಭಟ್ಟರು ತಪಶ್ಚರ್ಯೆ ವನ್ನು ಉಪಸಂಹರಿಸಿ ಉತ್ತರ ಸೀಮೆಗೆ ಹೋದರು. ಇಂಥಲ್ಲಿಗೇ ಹೋಗಬೇಕೆಂದು ಶ್ರೀವೆಂಕಟಪತಿಯು ಹೇಳದ್ದರಿಂದ ಅವರು ಬಹುವಿಧವಾಗಿ ಯೋಚಿಸಿ ಕಾಶೀಕ್ಷೇತ್ರಕ್ಕೆ ಹೋದರು. ಅಲ್ಲಿ ಕೆಲದಿನಗಳ ವರೆಗೆ ನಿಂತರು. ಕಾಶೀಕ್ಷೇತ್ರವು ಗೀರ್ವಾಣಭಾಷೆಗೆ ತವರೂರೆಂಬದು ಜಗತ್ಪ್ರಸಿದ್ಧವು. ಅನಂತಭಟ್ಟರಿಗೆ ವಿದ್ಯಾಭ್ಯಾಸ ಮಾಡಬೇಕೆಂಬ ಬುದ್ಧಿಯುಂಟಾಯಿತು. ಅವರು ಅಲ್ಲಿಯ ಪಂಡಿತರಲ್ಲಿ ವಿದ್ಯಾಭ್ಯಾಸ ಮಾಡಲಾರಂಭಿಸಿದರು. ಬುದ್ಧಿಯು ಚುರುಕಾಗಿದ್ದದರಿಂದ ಅವರು ಕೆಲದಿನಗಳಲ್ಲಿಯೇ ಶಾಸ್ತ್ರವೇತ್ತರಾದರು. ಹೀಗೆ ವಿದ್ಯೆಯನ್ನು ಸಂಪಾದಿಸಿದರೂ ಅವರ ಮನಸ್ಸಿಗೆ ಸಮಾಧಾನವಿಲ್ಲದಾಯಿತು. ಕಾಶಿಯಲ್ಲಿ ಇವರಿಗೆ ಯಾರೂ ಸದ್ಗುರುಗಳಾಗಲಿಲ್ಲ. ಅವರು ಕಾಶಿಯನ್ನು ಬಿಟ್ಟು ಸದ್ಗುರು ಶೋಧವನ್ನು ಮಾಡಲಾರಂಭಿಸಿದರು. ಹೀಗೆ ತಿರಗುವಾಗ ಅವರಿಗೆ ಬ್ರಹ್ಮಚೈತನ್ಯರ ಕೀರ್ತಿಯು ಶ್ರವಣವಾಯಿತು. ಕೂಡಲೆ ಅವರು ಇಂದೂರಿಗೆ ಮಹಾರಾಜರ ಬಳಿಗೆ ಬಂದರು. ಇನ್ನೂ ಇವರಿಗೆ ಸದ್ಗುರುವು ದೊರ

ಕುವ ಯೋಗ ಬಾರದ್ದರಿಂದ ಸದ್ಗುರುವ ಇವರಿಗೆ ತನ್ನ ಗುರುತು ಕೊಡಲಿಲ್ಲ. ಅನಂತಭಟ್ಟರು ದರ್ಶನಕ್ಕೆ ಬಂದಾಗ ಮಹಾರಾಜರು ಸ್ತ್ರೀಸಮೂಹದಲ್ಲಿ ಕುಳಿತುಕೊಂಡಿದ್ದರು. ವಿರಕ್ತಸ್ವಭಾವದ ಅನಂತಭಟ್ಟರಿಗೆ ಇದು ಸಹನವಾಗಲಿಲ್ಲ. ಆದ್ದರಿಂದ ಅವರು ಬಹಳ ಹೊತ್ತು ಕೂಡಾ ಅಲ್ಲಿ ನಿಲ್ಲದೆ ನರಸೋಬನ ವಾಡಿಗೆ ಬಂದರು. ಮತ್ತು ಅಲ್ಲಿ ಶ್ರೀದತ್ತಾತ್ರೇಯನನ್ನು ಕುರಿತು ತಪಶ್ಚರ್ಯ ಮಾಡಲಾರಂಭಿಸಿದರು. ಏಳು ದಿನಗಳ ವರೆಗೆ ಅನುಷ್ಠಾನ ಮಾಡಲು ಶ್ರೀದತ್ತನು ಅವರ ಸ್ವಪ್ನದಲ್ಲಿ ಬಂದು—"ನೀನು ಮೂರ್ಖನಿರುವಿ, ನಿನ್ನ ಸದ್ಗುರುವನ್ನು ಇಂದೂರಲ್ಲಿಯೇ ಬಿಟ್ಟು ಇಲ್ಲಿಗೇಕೆ ಬಂದೆ? ನಡೆ ಹೋಗು" ಎಂದು ನುಡಿದನು. ಅನಂತಭಟ್ಟರಿಗೆ ಎಚ್ಚರವಾಯಿತು. ಸ್ವಪ್ನಸಂಗತಿಯು ಪೂರಾ ಸ್ಮರಣೆಯಲ್ಲಿತ್ತು. ಆಗ ಅವರಿಗೆ ಬಹಳ ಪಶ್ಚಾತ್ತಾಪವಾಯಿತು. ಸದ್ಗುರುವನ್ನು ಉಪೇಕ್ಷೆ ಮಾಡಿ ಬಂದದ್ದು ಅನುಚಿತವಾಯಿತೆಂದು ತಿಳಿದು ಪುನಃ ಇಂದೂರಿಗೆ ನಡೆದರು. ದಾರಿಯಲ್ಲಿ ಸದ್ಗುರುವಿನ ಚರಣಗಳನ್ನೇ ಸ್ಮರಿಸುತ್ತ ನಡೆದಿದ್ದರು. ಅನಂತಭಟ್ಟರು ಯಾವ ಸಮಯದಲ್ಲ ದರ್ಶನಕ್ಕೆ ಹೋದರೋ ಆ ಸಮಯದಲ್ಲಿ ಅವರ ಬಳಿಯಲ್ಲಿ ಯಾರೂ ಇರಲಿಲ್ಲ. ಮಹಾರಾಜರೊಬ್ಬರೇ ಕುಳಿತುಕೊಂಡಿದ್ದರು. ಅನಂತಭಟ್ಟರು ದಂಡವತ್ ನಮಸ್ಕರಿಸಿ ಎದ್ದು ನಿಲ್ಲಲು ಮಹಾರಾಜರು ಕಾಣಿಸದೆ ಅವರ ಸ್ಥಳದಲ್ಲಿ ಒಂದು ದೊಡ್ಡ ಮಂಗವು ಕುಳಿತಂತೆ ತೋರಿತು. ಭಟ್ಟರು ಅಂಜಿದರು. ಅಷ್ಟರಲ್ಲಿ ಮಂಗವು ಮಾಯವಾಗಿ ಮಹಾರಾಜರು ಕಾಣಿಸಿದರು. ಅನಂತಭಟ್ಟರು ಆಶ್ಚರ್ಯಪಟ್ಟು ಮಹಾರಾಜರಲ್ಲಿ ಭಯ-ಭಕ್ತಿಯುಳ್ಳವರಾದರು. ಆ ಕೂಡಲೆ ಅವರ ಮನಸ್ಸಿಗೆ ವಿಲಕ್ಷಣ ಶಾಂತಿಯು ಪ್ರಾಪ್ತವಾಯಿತು. ಇವರೇ ನನ್ನ ಸದ್ಗುರುಗಳು; ಇವರ ಚರಣಗಳನ್ನು ಬಿಟ್ಟು ಬೇರೆ ಕಡೆಗೆ ಎಲ್ಲಿಯೂ ಹೋಗಬಾರದೆಂಬ ನಿಶ್ಚಯವು ಅವರಲ್ಲಿ ಹುಟ್ಟಿತು. ಅಂದಿನಿಂದ ಅವರು ಸದ್ಗುರುವಿನ ದಾಸರಾಗಿ ಬ್ರಹ್ಮಾನಂದ

ರೆಂದು ಪ್ರಖ್ಯಾತರಾದರು. (ಇವರ ಸ್ವತಂತ್ರ ಚರಿತ್ರೆಯಲ್ಲಿ ಇವರ ಲೀಲೆಗಳನ್ನು ಓದಬಹುದು.)

ಎರಡನೆಯವರು ಪಚ್ಚಿಗಾನಂದರು; ಇವರು ನಮ್ಮ ವಾಚಕರಿಗೆ ಹೊಸಬರಲ್ಲ. ಮಹಾರಾಜರನ್ನು ರೋಗಪಾಶದಿಂದ ಬಂಧಿಸಿದ ಮಾಂತ್ರಿಕರಲ್ಲಿ ಇವರೊಬ್ಬರೆಂಬುದನ್ನು ಈ ಮೊದಲೇ ಹೇಳಿದ್ದು ಸ್ಮರಣೆಯಲ್ಲಿರಬಹುದು. ಮೂರನೆಯವರು ಕುರ್ತಕೋಟಿಯ ಮಹಾಭಾಗವತರು. ಇವರ ಮೂಲ ಹೆಸರು ಲಿಂಗನಗೌಡರು ಎಂದಿರುವದು. ಇವರು ಗರ್ಭಶ್ರೀಮಂತರು. ಆದರೂ ವೈರಾಗ್ಯವನ್ನು ತಾಳಿ ಗುರುಸೇವೆಗೆ ನಿಂತರು. ಮುಂದೆ ಇವರು ಕರವೀರದ ಜಗದ್ಗುರು ಪೀಠಕ್ಕೆ ಕುಳಿತು ಈಗ ನಾಶಿಕಕ್ಷೇತ್ರದಲ್ಲಿರುವರು. ಡಾ. ಕುರ್ತಕೋಟಿ ಎಂಬ ಹೆಸರಿನಿಂದ ವಿದೇಶಗಳಲ್ಲಿ ಕೂಡ ಇವರು ಪ್ರಸಿದ್ಧಿಯನ್ನು ಪಡೆದಿರುವರು. ಇವರಲ್ಲದೆ ಅಸಂಖ್ಯ ಜನರು ಗುರುಸೇವೆಗೆ ಬಂದಿದ್ದರು. ಭಾವೂಸಾಹೇಬ ಕೇತಕರ, ಬಾಪೂಸಾಹೇಬ, ಮುಕ್ತಾಬಾಯಿ, ಮಥೂಬಾಯಿ ಮೊದಲಾದ ಭಕ್ತರು ಪ್ರಸಿದ್ಧಿಯನ್ನು ಪಡೆದರು. ಇವರೆಲ್ಲರೂ ಮಹಾರಾಜರ ಮನೆಯಲ್ಲಿ ಮನಮುಟ್ಟಿ ದೇಹದಂಡನ ಮಾಡಿದರು. ಮುಕ್ತಾಬಾಯಿಯು ಮಹಾರಾಜರ ಅಡಿಗೇ ಮನೆಯಲ್ಲ ಅನ್ನಪೂರ್ಣೆಯಂತೆ ಪರಿಶೋಭಿಸುತ್ತಿದ್ದಳು. ಈಕೆಯು ದೇಹದಂಡನ ಮಾಡುವದರಲ್ಲಿ ಬಹು ಗಟ್ಟಿಗಳು. ದೇಹವನ್ನು ಸವಿಸಿ ಶ್ರೀ ಗುರು ಚರಣದಲ್ಲಿ ಐಕ್ಯಳಾದಳು.

ಅನುಗ್ರಹಕ್ಕೆ ಪಾತ್ರರಾದ ಬಳಿಕ ಮಹಾರಾಜರು ಅವರನ್ನು ತಮ್ಮ ಬಳಿಯಲ್ಲಿಟ್ಟುಕೊಳ್ಳುತ್ತಿದ್ದಿಲ್ಲ. ಅವರನ್ನು ಅವರ ಇಷ್ಟವಿದ್ದ ಸ್ಥಳಕ್ಕೆ ಶ್ರೀರಾಮ ಭಕ್ತಿಯ ಪ್ರಸಾರಾರ್ಥವಾಗಿ ಕಳಿಸುತ್ತಿದ್ದರು. ಆದರೆ ಗುರುವಿನಂತೆ ಭಕ್ತಿಮಾರ್ಗವನ್ನು ಬೆಳೆಯಿಸಿದ ಶ್ರೇಯಸ್ಸು ಬೆಳಧಡಿಯ ಬ್ರಹ್ಮಾನಂದರೊಬ್ಬರಿಗೇ ಸಿಕ್ಕಿತಲ್ಲದೆ ಅನ್ಯರಿಗೆ ಸಿಗಲಿಲ್ಲ. ಈ ಬ್ರಹ್ಮಾನಂದರ ಯೋಗದಿಂದ ಕರ್ನಾಟಕದಲ್ಲಿ ಹಲವು ಜನರು ರಾಮಭಕ್ತಿಗೆ ಹತ್ತಿದರು.

ಹಾಗು ಮಹಾರಾಜರ ಭಕ್ತರಾದರು. ಇವರ ಯೋಗದಿಂದಲೇ ಮಹಾರಾಜರು ಕರ್ನಾಟಕಕ್ಕೆ ಬಂದು ಭಕ್ತರಿಗೆ ದರ್ಶನಲಾಭವನ್ನು ಒದಗಿಸಿ ಕೊಟ್ಟರು. (ಈ ಸಂಗತಿಯು ಮುಂದೆ ಬರುವದು.) ಈ ಮೇರೆಗೆ ಮಹಾರಾಜರ ಭಕ್ತಸಮುದಾಯವು ಅಸಂಖ್ಯಾಕವಾಗಿ ಬೆಳೆಯಿತು. ಇವರು ತಮ್ಮ ಕಡೆಗೆ ಶರಣುಬಂದ ವ್ಯಕ್ತಿಗಳಿಗೆ ಅಥವಾ ಯಾವದೊಂದು ಕಾಮನೆಯಿಂದ ಬಂದ ಭಕ್ತರಿಗೆ ರಾಮಜಪವನ್ನು ಮಾಡಿರೆಂದು ಹೇಳುತ್ತಿದ್ದರು. ಹದಿಮೂರು ಕೋಟಿ ರಾಮಜಪವನ್ನು ಮಾಡಿದರೆ ನೀವು ಸಹಜವಾಗಿ ಉದ್ಧೃತರಾಗುವಿರೆಂದು ಹೇಳುತ್ತಿದ್ದರು. ಜನರು ಪಾಪ ಕಾರ್ಯಾಸಕ್ತರಾಗಿ ನಿತ್ಯಕರ್ಮಾನುಷ್ಠಾನಗಳನ್ನು ಯಥಾಸಾಂಗವಾಗಿ ಮಾಡದ್ದರಿಂದ ಸಾಧುಸಜ್ಜನರು ಅವತರಿಸಿ ಕೇವಲ ಭಕ್ತಿಮಾರ್ಗದ ಕಡೆಗೆ ಅವರನ್ನು ತಿರುಗಿಸುವರು. ಈ ಭಕ್ತಿಮಾರ್ಗವು ಭಗವತ್ಸನ್ನಿಧಿಗೆ ಹೋಗಲು ರಾಜಮಾರ್ಗದಂತಿರುವದು. ಇದರಲ್ಲಿ ಮಂತ್ರಲೋಪವಾದಿದ ದೋಷವಿಲ್ಲ. ಮಡಿ-ಮೈಲಿಗೆಯು ಗೊಂದಲವಿಲ್ಲ; ನ್ಯಾಸಾದಿಗಳ ಆತಂಕವಿಲ್ಲ; ರಾಜಮಾರ್ಗದಲ್ಲಿ ಕಣ್ಣುಮುಚ್ಚಿಕೊಂಡು ನಡೆದರೂ ಹ್ಯಾಗೆ ಬಾಧಕವಿಲ್ಲವೋ ಹಾಗೆ ಈ ಭಕ್ತಿಮಾರ್ಗದಲ್ಲಿ ಭಗವಂತನನ್ನು ನಿಸ್ಸೀಮವಾಗಿ ಭಜಿಸಿದರೆ ಅವರಿಗೆ ಯಾವ ಬಾಧೆಯೂ ಆಗಲಾರದು. ಪ್ರಭುವಾದ ಶ್ರೀರಾಮನನ್ನು ಕೂತು ಸ್ಮರಿಸಬಹುದು, ನಿಂತು ಸ್ಮರಿಸಬಹುದು, ಮಲಗಿ ಸ್ಮರಿಸಬಹುದು; ಯಾವ ಕಾರ್ಯ ಮಾಡಿದರೂ ಆತನ ಚರಣಗಳಲ್ಲಿ ಚಿತ್ತವಿದ್ದರೆ ತೀರಿತು. ಆತನಿಗೆ ಭಕ್ತಿಯೋಗವು ಸಾಧಿಸಿತೆಂದು ಹೇಳಲಾಗುವದು. ಇಂಥ ಶ್ರೇಷ್ಠತರವಾದ ಹಾಗು ಜಗದುದ್ಧಾರಕವಾದ ಭಕ್ತಿಮಾರ್ಗವನ್ನು ಜನತೆಗೆ ತೋರಿಸಿಕೊಡುವದಕ್ಕಾಗಿಯೇ ಮಹಾರಾಜರಂಥ ವಿಭೂತಿಗಳ ಅಭಿಯೋಗವು. ಇಂಥ ವಿಭೂತಿಗಳು ಪ್ರಕಟವಾದಾಗ ಅಜ್ಞ ಜನರು ಇವರ ಬಳಿಗೆ ಕಾಮನಾಪೂರ್ಣಾರ್ಥವಾಗಿ ಎಡತಾಕುವರು. ಲೋಕದಲ್ಲಿ ಐಹಿಕ ಸುಖಾಪೇಕ್ಷೆಗಳೇ ಬಹು

ಜನರಿದ್ದದರಿಂದ ಅವರ ಕಾಮನೆಗಳನ್ನು ಪರಿಪೂರ್ಣಗೊಳಿಸಿ ಅವರನ್ನು ಭಗವದ್‌ಭಕ್ತಿಗೆ ತೊಡಗಿಸುವದೇ ಸಾಧುಸಜ್ಜನರಿಗೆ ದೊಡ್ಡ ಕೆಲಸವಾಗಿರುತ್ತದೆ. ಅದಕ್ಕಾಗಿಯೇ ಅವರು ಹಗಲಿರುಳೂ ಜಾಗರೂಕತೆಯಿಂದ ನಡೆದು ಜನರ ಮನಸ್ಸನ್ನು ತೃಪ್ತಿಗೊಳಿಸಿ ಅವರಲ್ಲಿ ಭಕ್ತಿಯ ಬೀಜವನ್ನು ಊರುವರು.

---

## ೧೪ನೆಯ ಅಧ್ಯಾಯ—ನಿಸ್ಪೃಹತ್ವ.



ಮಹಾರಾಜರ ಎರಡನೆಯ ಕುಟುಂಬಕ್ಕೆ ಭಕ್ತರೂ ಏಷ್ಯರೂ ಆಯಿಸಾಹೇಬ ಎಂದು ಕರೆಯುತ್ತಿದ್ದರು. ಎಷ್ಟೋ ಜನ ಹೆಂಗಸರು ಅವರ ಸೇವೆಯಲ್ಲಿ ತತ್ಪರರಿದ್ದರು. ಆಯಿಸಾಹೇಬರು ಕುರುಡರಿದ್ದರೂ ಸೇವೆಗೈಯ್ಯುವ ಭಕ್ತರು ಅಸಂಖ್ಯ ಜನರಿದ್ದದರಿಂದ ಅವರಿಗೆ ಯಾವ ಬಗೆಯ ತೊಂದರೆಯೂ ಆಗುತ್ತಿರಲಿಲ್ಲ. ಪ್ರತ್ಯಕ್ಷ ಮಹಾರಾಜರ ಹೆಂಡತಿಯೆಂದ ಬಳಿಕ ಅವರಿಗೆ ಕೊರತೆಯಾತರದು? ಆ ಸಾಧ್ವಿಯ ಪೂರ್ವಜನ್ಮದ ಪುಣ್ಯವನ್ನು ಹಲವು ಜನರು ಕೊಂಡಾಡುತ್ತಿದ್ದರು.

ಹೀಗೆ ಮಹಾರಾಜರು ಆ ಸಾಧ್ವಿಯಾದ ಹೆಂಡತಿಯೊಡನೆ ಪ್ರಪಂಚ ಮಾಡುತ್ತಿರಲು ಆಯಿಸಾಹೇಬರು ಗರ್ಭವತಿಯಾದರು. ಜನರು ಉತ್ಸವಾದಿಗಳನ್ನು ನಡಿಸಿದರು. ಪ್ರಥಮ ಗರ್ಭದಲ್ಲಿ ಹುಟ್ಟಿದ ಶಿಶುವು ಜನ್ಮ ತಾಳಿದ ಕೂಡಲೇ ಮೃತವಾಯಿತು. ಮಹಾರಾಜರು ನಿಜಾನಂದಮಗ್ನರಾದ್ದರಿಂದ ಅವರಿಗೆ ಶಿಶುವು ಹುಟ್ಟಿದರೂ ಅಷ್ಟೇ ಸಂತೋಷವು; ಮೃತಪಟ್ಟರೂ ಅಷ್ಟೇ ಸಂತೋಷವು. ಇದರಂತೆ ದ್ವಿತೀಯ ಗರ್ಭದ ಅವಸ್ಥೆಯೂ ಆಯಿತು. ಆದರೆ ಆಯಿಸಾಹೇಬರಿಗೆ ಈ ವಿಷಯದಲ್ಲಿ ಸ್ವಲ್ಪ ವ್ಯಸನವಾಯಿತು. ಎರಡು ಹಡೆದರೂ ಒಂದೂ ದಕ್ಕಲಿಲ್ಲೆಂದು ಅವರು ಚಿಂತೆಗೊಳಗಾದರು. ತಮ್ಮ ಹೆಂಡತಿಯ ಚಿಂತೆಯು ಮಹಾರಾಜರಿಗೆ

ಗೊತ್ತಾಗದೆ ಇರಲಿಲ್ಲ. ಎಷ್ಟಾದರೂ ಮನುಷ್ಯರ ಮಾಯಾಪಾಶವು ಹರಿದು ಹೋಗುವದಿಲ್ಲೆಂದು ನಕ್ಕರು. ಒಳಿಕ ಅವರು ಹೆಂಡತಿಯನ್ನು ಒಳಿಯಲ್ಲಿ ಕರೆದು ಆಕೆಗೆ ಜ್ಞಾನೋಪದೇಶ ಮಾಡಿದರು. ಮನುಷ್ಯನಲ್ಲಿ ಕೇವಲ ಶುದ್ಧ ಸತ್ವಗುಣವಿದ್ದರೆ ಜ್ಞಾನೋಪದೇಶವು ಕೂಡಲೆ ಫಲಿಸುವದು, ಆದರೆ ರಾಜಸ ಮಿಶ್ರವಿದ್ದರೆ ಬಹುದಿವಸಕ್ಕೆ ಫಲಿಸುವದು. ತಮೋಮಿಶ್ರವಿದ್ದರೆ ಜನ್ಮಾಂತರದಲ್ಲಿ ಫಲಿಸುವದು. ಮಳೆಯಿಂದ ಶುದ್ಧ ಎರೀ ನೆಲವು ಬೇಗ ನೆನೆಯುವಂತೆ ಕರ್ಲನೆಲವಾಗಲಿ, ಮಸಾರಿ ನೆಲವಾಗಲಿ ನೆನೆಯುವದಿಲ್ಲೆಂಬದನ್ನು ಎಲ್ಲರೂ ಒಲ್ಲರು; ಅದರಂತೆಯೇ ಮಿಶ್ರಸ್ವಭಾವದ ಜನರ ಸ್ಥಿತಿಯಿರುತ್ತದೆ. ಆಯಿಸಾಹೇಬರಲ್ಲಿ ಅಷ್ಟೊಂದು ಶುದ್ಧ ಸತ್ವಗುಣವಿರದ್ದರಿಂದ ಆ ಉಪದೇಶದ ಪರಿಣಾಮವು ಆ ಕೂಡಲೆ ಆಗಲಿಲ್ಲ. ಅವರಿಗೆ ಮಕ್ಕಳ ಹಂಬಲವೇ ಹೆಚ್ಚಾಯಿತು. ಭಕ್ತರ ಅಥವಾ ಆಪ್ತರ ಇಚ್ಛೆಯನ್ನು ಪೂರ್ಣಪಡಿಸಿ ಅವರಲ್ಲಿ ಭಗವದ್ಭಕ್ತಿಯನ್ನು ನೆಲೆಗೊಳಿಸುವದು ಜ್ಞಾನಿಗಳ ಕೆಲಸವಾದ್ದರಿಂದ ಮಹಾರಾಜರು ಆಕೆಯ ಇಷ್ಟವನ್ನು ನೆರವೇರಿಸಬೇಕೆಂದು ಇಚ್ಛಿಸಿ "ನಿನ್ನ ಇಚ್ಛೆಯು ಕೈಗೂಡುವದು" ಎಂದು ಅಭಯವನ್ನಿತ್ತರು. ಆ ಸಾಧ್ವಿಯು ಹರುಷಚಿತ್ತಳಾಗಿ ಸ್ವಸ್ಥಾನಕ್ಕೆ ಹೋದಳು.

ಮನುಷ್ಯನಿಗೆ ಅಜ್ಞಾನವೆಂಬ ಮುಸುಕು ಇರುವ ವರೆಗೆ ಅವನಿಗೆ ಸೃಷ್ಟಿಯು ಪರಿಜ್ಞಾನವಾಗುವದಿಲ್ಲ. ಸತ್ಯವಾವದು ಅಸತ್ಯವಾವದು ಎಂಬದು ಕಾಣುವದಿಲ್ಲ. ಸತ್ಸಹವಾಸದಿಂದ-ಸದುಪದೇಶ ಶ್ರವಣದಿಂದ ಅಜ್ಞಾನವೆಂಬ ಮುಸುಕು ಹರಿಯಿತೆಂದರೆ ಆತನಿಗೆ ಎಲ್ಲವೂ ಕಾಣಿಸುವದು. ಆ ವರೆಗೆ ಏನು ಮಾಡಿದರೂ ಆತನಿಗೆ ವಿಷಯದ ಹಂಬಲವು ಬಿಡುವದಿಲ್ಲ.

ಆಯಿಸಾಹೇಬರು ಮೂರನೇ ಸಾರೆ ಗರ್ಭವತಿಯರಾದರು. ಈ ಸಾರೆ ಮಹಾರಾಜರು ಅಭಯವನ್ನು ಕೊಟ್ಟದ್ದರಿಂದ ಶಿಶುವು ಜನಿಸಿದ

ಕೂಡಲೆ ವ್ಯತಪಸ್ಥಳವಲ್ಲೆಂದು ಇನಾಮದಾರರು ತಿಳಿದರು; ಭಕ್ತರೆಲ್ಲರಿಗೂ ಪರಮಾನಂದವಾಯಿತು. ಗರ್ಭವು ಶುಕ್ಲೇಂದುವಿನಂತೆ ಬೆಳೆಯುತ್ತಿತ್ತು. ನವಮಾಸಗಳೂ ಪೂರ್ತಿಯಾದವು. ಆಗ ಆ ಸಾಧ್ವಿಯು ಕನ್ಯಾರತ್ನವನ್ನು ಹಡೆದಳು. ಶಿಶುವು ಸಲಕ್ಷಣವಾಗಿತ್ತು. ಹುಟ್ಟಿದ ಹನ್ನೆರಡನೆಯ ದಿವಸಕ್ಕೆ ಆ ಶಿಶುವಿಗೆ ಶಾಂತಾ ಎಂದು ಹೆಸರನ್ನಿಟ್ಟರು. ಹೆಸರಿಗೆ ತಕ್ಕಂತೆ ಆ ಶಿಶುವು ಪರಮ ಶಾಂತವಾಗಿಯೇ ಇದ್ದಿತು. ಮಹಾರಾಜರೂ ಆ ಮಗುವಿನ ಮೇಲೆ ಪ್ರೇಮಮಾಡುತ್ತಿದ್ದರು. ಆಯಿಸಾಹೇಬರಂತೂ ವಿಶೇಷವಾಗಿ ಮಮತೆ ಮಾಡುತ್ತಿದ್ದರು.

ಮಗುವು ಬೆಳೆದು ದೊಡ್ಡದಾಯಿತು. ಕಾಲು ಬಂದು ಮನೆ ತುಂಬ ಓಡಾಡಲಾರಂಭಿಸಿತು. ಭಕ್ತರು ಆ ಮಗುವಿಗೆ ಹಲವು ಪ್ರಕಾರದ ಅಲಂಕಾರಗಳನ್ನು ಮಾಡಿಸಿಟ್ಟರು. ಆ ಮಗುವಿನ ವೈಭವವು ಬೆಳೆಯಿತು. ಆಯಿಸಾಹೇಬರಿಗೂ ಅಸಂಖ್ಯಜನರು ಉಡುಗರೆ ಮಾಡಲಾರಂಭಿಸಿದರು. ಸೀರೆ-ಕುಪ್ಪಸಗಳೂ ಜರತಾರಿ ಪೀತಾಂಬರ ಮೊದಲಾದವುಗಳೂ ಲೆಕ್ಕವಿಲ್ಲದಷ್ಟು ಸಂಗ್ರಹವಾದವು. ಇದನ್ನೆಲ್ಲ ನೋಡಿ ಮಹಾರಾಜರು ಮನಸ್ಸಿನಲ್ಲಿ—ವಿಷಯವು ಮನುಷ್ಯರಿಗೆ ಸುಖಕರವಲ್ಲ. ಅದು ಇದ್ದರೆ ಮೋಹ ಉತ್ಪನ್ನವಾಗುತ್ತದೆ. ಮನೆಯಲ್ಲಿ ವಿಷಯ ಸಂಗ್ರಹವು ಹೆಚ್ಚಾಯಿತು. ಭಕ್ತಾದಿಗಳು ಬೇಡವೆಂದರೂ ಮನೆತುಂಬ ಸೀರೆ-ಕುಪ್ಪಸಗಳನ್ನೇ ಮಾಡಿಬಿಟ್ಟಿರುವರು. ಇನ್ನೂ ಎಲ್ಲ ವೈಭವವನ್ನೂ ಬ್ರಾಹ್ಮಣರಿಗೆ ದಾನಮಾಡಿ ಬಿಡುವದು ಉಚಿತವು'' ಎಂದು ಯೋಚಿಸಿ ಹೆಂಡತಿಯನ್ನು ಕರೆದು ನುಡಿದರೇನಂದರೆ—"ನೀನು ಉಡುವದು ವರುಷಕ್ಕೆ ಎರಡು ಸೀರೆ. ಹೀಗಿದ್ದು ನಿನ್ನಲ್ಲಿ ನೂರಾರು ಸೀರೆಗಳೇಕೆ? ಪೀತಾಂಬರಗಳೇಕೆ? ಇವನ್ನೆಲ್ಲ ತಕ್ಕೊಂಡು ಮಾಡುವದೇನು? ಊರಲ್ಲಿ ಬಡ ವೈದಿಕಮುತ್ತೈದೆಯರಿಗೆ ಉಡಲಿಕ್ಕೆ ಸಾಲೆಂಬಿಸ ಮಡಿಸೀರೆಗಳು ಸಿಗುವದು ದುರ್ಲಭವಿರಲು ನೀನು ಹೀಗೆ ಮನೆಯಲ್ಲ ಸನಗು ಹಚ್ಚಿದಂತೆ ಸೀರೆಗ

ಳನ್ನು ಇಡುವುದು ಪವಿತ್ರವೇ? ಈಗಲೇ, ಈ ಎಲ್ಲ ಸೀರೆಗಳನ್ನು ಸುವಾಸಿನಿಯರಿಗೆ ದಾನವಾಗಿ ಕೊಟ್ಟು ಬಿಡು. ನಿನ್ನ ಸೀರೆಗಳು ಹರಿದರೆ ಮತ್ತೆ ಕೊಡಲು ಶ್ರೀರಾಮನು ಸಮರ್ಥನಿರುವನು. ಅದರಂತೆ ಶಾಂತೆಯು ನಿಮ್ಮ ಅಲಂಕಾರಗಳನ್ನೂ ಬ್ರಾಹ್ಮಣರಿಗೆ ಕೊಟ್ಟು ಬಿಡೋಣ; ನಮಗೆ ಶ್ರೀರಾಮನಾಮದ ಸಂಪತ್ತೊಂದೇ ಸಾಕು. ಆ ನಾಮವೇ ನಮಗೆ ಧನವು. ಆ ನಾಮವೇ ನಮಗೆ ಭೂಷವವು.''

ಈ ಮೇರೆಗೆ ಮಹಾರಾಜರು ನುಡಿಯಲು ಆಯಿಸಾಹೇಬರು ಸುಮ್ಮನೆ ಕುಳಿತರು; ಅವರಿಗೆ ಏನು ಮಾತಾಡಬೇಕೆಂಬುದು ತಿಳಿಯದಾಯಿತು. ಸಮರ್ಥ ಪತಿಯು ಹೀಗೆ ಹೇಳುತ್ತಿರಲು ಆತನ ಮಾತನು ಮೀರುವದು ಕಷ್ಟವಾಯಿತು. ಇತ್ತ ಉತ್ತಮೋತ್ತಮವಾದ ನೂರಾರು ಸೀರೆಗಳನ್ನೂ ಶಾಂತೆಯು ಅಲಂಕಾರಗಳನ್ನೂ ಕೊಡುವದು ಕಷ್ಟವಾಯಿತು. ವಿಷಯದ ಮೋಹವು ಬಲು ಕೆಟ್ಟದು. ಆಯಿಸಾಹೇಬರಿಗೆ ಕಣ್ಣು ಕಾಣದಿದ್ದರೂ ಪದಾರ್ಥಗಳ ಮೇಲಿನ ಮೋಹವು ಜಾಗ್ರತವಾಗಿಯೇ ಇತ್ತು. ಆದರೂ ಅವರು ವಿವೇಕವನ್ನು ತಂದುಕೊಂಡು ಪತಿಯ ಆಜ್ಞೆಗೆ ಸಮ್ಮತಿಯನ್ನಿತ್ತರು. ಹೆಂಡತಿಯು ಒಪ್ಪಿಕೊಂಡದ್ದೊಂದೇ ತಡ, ಮಹಾರಾಜರು ತಮ್ಮ ಬಳಿಯಲ್ಲಿದ್ದ ಹಾಗು ಊರಲ್ಲಿದ್ದ ಬಡಮುತ್ತೈದೆಯರನ್ನು ಕರೆಯಿಸಿ ಎಲ್ಲ ಸೀರೆ ಕುಪ್ಪಸಗಳನ್ನು ಒಯ್ಯಲಿಕ್ಕೆ ಹೇಳಿದರು. ನಮ್ಮ ಬಟ್ಟೆಗಳ ಬಡತನವು ಹಿಂಗಿತೆಂದು ಆ ಸುವಾಸಿನಿಯರು ತಮಗೆ ಬೇಕು ಬೇಕಾದ ಸೀರೆ-ಕುಪ್ಪಸಗಳನ್ನು ತೆಕ್ಕೊಂಡು ಮಹಾರಾಜರನ್ನು ನಮಸ್ಕರಿಸಿ ಹೊರಟು ಹೋದರು. ಕ್ಷಣದಲ್ಲಿ ಆಯಿಸಾಹೇಬರ ವಸ್ತ್ರಭಾಂಡಾರವು ಬರಿದಾಗಿ ಹೋಯಿತು.

ಬಳಿಕ ಮಹಾರಾಜರು ಬ್ರಾಹ್ಮಣರನ್ನು ಕರೆಯಿಸಿ ಶಾಂತೆಯ ಮೈಮೇಲಿನ ಆಭರಣಗಳನ್ನು ಹಂಚಿಕೊಟ್ಟು ಬಿಟ್ಟರು. ಮಹಾರಾಜರ ಈ ನಿಸ್ಪೃಹಧರ್ಮವನ್ನು ನೋಡಿ ಜನರೆಲ್ಲರೂ ಆಶ್ಚರ್ಯಪಟ್ಟರು.

ದೊಡ್ಡವರ ಧರ್ಮವೇ ಇಂಥಹದು. ಅವರಿಗೆ ಯಾತರ ಮೇಲೆಯೂ ಅಪೇಕ್ಷೆ ಇರುವದಿಲ್ಲ. ಸಕಲ ಪದಾರ್ಥಗಳ ಮೇಲಿನ ಮೋಹವನ್ನು ಬಿಡಿರೆಂದು ಜಗತ್ತಿಗೆ ಉಪದೇಶ ಮಾಡುವ ಸಾಧುಗಳೇ ವಿಷಯಗಳ ಮೇಲೆ ಪ್ರೇಮ ಮಾಡಿದರೆ ಅವರ ಮಾತನ್ನು ಜನರು ನಂಬಬಹುದೇ? ಯಾರು ನುಡಿದಂತೆ ನಡೆಯುವರೋ ಅವರೇ ಸಾಧುಗಳು; ಅವರೇ ಸಜ್ಜನರು. ನುಡಿಗೂ ನಡೆಗೂ ಮೇಳ ಇರಬೇಕು. ಜಗತ್ತನ್ನು ಠಕ್ಕಿಸುವವರು ಮಾತ್ರ ಹೇಳುವದೊಂದು ತಾವು ನಡೆಯುವದೊಂದು ಹೀಗೆ ಆಚರಿಸುವರು. ಯಾರು ಜಗತ್ತನ್ನು ಉದ್ಧರಿಸುವವರೋ ಅವರು ಹೀಗೆ ಮಾಡಿದರೆ ಜಗತ್ತನ್ನು ಉದ್ಧರಿಸುವವರೇ ಇಲ್ಲದಾದೀತು. ಸಜ್ಜನರಾದವರಿಗೆ ಆಪ್ತೇಷ್ಟರ ಮೋಹ ಇರುವದಿಲ್ಲ-ಮಕ್ಕಳಿಂಬ ಮಮತೆಯಿರುವದಿಲ್ಲ. ಮಕ್ಕಳಾಗಲಿ, ಆಪ್ತೇಷ್ಟರಾಗಲಿ ಜೀವದಿಂದಿರುವ ತನಕ ಸಂರಕ್ಷಿಸುವರು. ದೇಹಯಾತ್ರೆಯನ್ನು ಮುಗಿಸಿದರೆ ಯಾವನಾದರೂ ಆಪ್ತೇಷ್ಟನು ಊರಿಗೆ ಹೋಗುವಾಗ ಜನರು ಅವನನ್ನು ಆನಂದದಿಂದ ಕಳಿಸಿಕೊಡುವಂತೆ ಸಜ್ಜನರು ನಿರ್ಯಾಣ ಹೊಂದಿದ ತಮ್ಮ ಸಂಬಂಧಿಕರ ದೇಹಕ್ಕೆ ಆನಂದದಿಂದ ಅಗ್ನಿಸಂಸ್ಕಾರ ಮಾಡುವರು. ಸಜ್ಜನರಿಗೆ ಮಕ್ಕಳು ಹುಟ್ಟಿದರೂ ಆನಂದ, ಸತ್ತರೂ ಆನಂದ; ಏನಾದರೂ ಅವರ ಆನಂದಕ್ಕೆ ಭಂಗಬರುವದಿಲ್ಲ. ಹೀಗೆ ಅವರು ಅಖಂಡಾನಂದಮಗ್ನರಾಗಿರುವದರಿಂದಲೇ ಅವರಿಗೆ ದೊಡ್ಡವರೆಂದು ಕರೆಯುವರು. ಇದೇ ನಿಸ್ಪೃಹತ್ವವು. ಯಾವ ಆಶೆಯೂ ಇಲ್ಲದವನಿಗೇ ನಿಸ್ಪೃಹನೆಂಬ ಸಂಜ್ಞೆಯು. ಸಜ್ಜನರಲ್ಲಿಯೇ ಇಂಥ ನಿಸ್ಪೃಹತೆಯು ಕಂಡು ಬರುವದಲ್ಲದೆ ಉಳಿದವರಲ್ಲಿ ಕಂಡು ಬರಲಾರದು.

---

## ೧೫ನೆಯ ಅಧ್ಯಾಯ:—ಸಜ್ಜನರ ಮಹಿಮೆ.



ಲೋಕದಲ್ಲಿ ಸಜ್ಜನರ ಮಹಿಮೆಯು ಯಾರಿಗೂ ತಿಳಿಯದು. ಅವರು ನೋಡಲಿಕ್ಕೆ ಸಾಮಾನ್ಯ ಮನುಷ್ಯರಂತೆಯೇ ತೋರುವರು. ಅವರಿಗೂ ನಮ್ಮಂತೆ ಕಣ್ಣು ಕೈಕಾಲು ಮೊದಲಾದ ಅವಯವಗಳು ಇರುವವು. ನಮ್ಮಂತೆ ಅವರೂ ಉಣ್ಣುವರು ತಿನ್ನುವರು. ನಮ್ಮಂತೆ ಎಲ್ಲ ದೇಹಧರ್ಮಗಳು ಅವರಿಗೆ ಇರುವವು. ಹೀಗಿದ್ದರೂ ಅವರಿಗೆ ದೊಡ್ಡವರೆಂದು ಯಾಕೆ ಕರೆಯಬೇಕೆಂದು ಹಲವರು ಪ್ರಶ್ನಮಾಡಬಹುದು. ಇಷ್ಟೇ ಅಲ್ಲ, ಎಷ್ಟೋ ಜನರು ಅವರನ್ನು ಪರೀಕ್ಷಿಸ ಹೋಗುವರು. ಓಣಿಯೊಳಗೆ ಬಿದ್ದಾಡುವ ಕಲ್ಲು ಮಣ್ಣುಗಳನ್ನು ಪರೀಕ್ಷಿಸುವ ಯೋಗ್ಯತೆಯು ನಮಗೆ ಇಲ್ಲದಿರಲು, ನಮ್ಮಂಥ ಪಾಮರರು ಹೆಮ್ಮೆಯಿಂದ ಸಜ್ಜನರನ್ನು ಪರೀಕ್ಷಿಸುತ್ತೇವೆಂದು ಮಾತಾಡುವದು ವ್ಯರ್ಥವಾದದ್ದಲ್ಲದೆ ಬೇರಿನ್ನೇನು? ಮಶಕವು ಅಂದರೆ ಸೊಣವು ಸಮುದ್ರವನ್ನು ಹಾರಿ ಆಚೆಯ ದಂಡೆಯನ್ನು ಮುಟ್ಟುತ್ತೇನೆನ್ನುವದೂ ಹೊನ್ನೇ ಹುಳವು ಸೂರ್ಯನ ತೇಜಸ್ಸನ್ನು ಕಳೆಗುಂದಿಸುತ್ತೇನೆನ್ನುವದೂ ಹ್ಯಾಗೆ ವ್ಯರ್ಥವೋ ಹಾಗೆ ಪಾಮರರಾದ ನಮ್ಮಂಥ ಮೂರ್ಖರು ಸಜ್ಜನರನ್ನು ಪರೀಕ್ಷಿಸುತ್ತೇವೆನ್ನುವದು ವ್ಯರ್ಥವಾಗಿರುತ್ತದೆ. ಆದರೆ ಏನು ಚಮತ್ಕಾರವೋ ಏನೋ ಸಜ್ಜನರನ್ನು ಕಂಡರೆ ದುರ್ಜನರ ತಲೆತಿರುಗಿ ಹೋಗುತ್ತದೆ. ಸಜ್ಜನರಿಗೆ ಏನು ಬೈಯಲಿ? ಅವರಿಗೆ ಏನು ಹೆಸರಿಡಲಿ, ಎನ್ನುವಹಾಗೆ ಆಗುತ್ತದೆ. ಇದೊಂದು ಸೃಷ್ಟಿಯ ನಿಯಮವೇ ಇದ್ದಂತಾಗಿರುತ್ತದೆ. ಲೋಕದಲ್ಲಿ ಅಸಂಖ್ಯ ಜನ ಸಾಧು-ಸತ್ಪುರುಷರು ಉದಯಿಸಿದರೂ ಅವರ ಜೊತೆಗೆ ನಿಂದಕರೂ ಹುಟ್ಟಿಯೇ ಬಂದಿರುತ್ತಾರೆ. ವಂದಿಸುವ ಭಕ್ತರಂತೆ ನಿಂದಿಸುವ ಭಕ್ತರೂ ಇರುವರೆಂದು. ನೀನು ದೊಡ್ಡವರು ಇವರಿಬ್ಬರೂ

ಆತನು ನಿಂದೆಯ ಮುಖಾಂತರವಾಗಿಯಾದರೂ ಮಹಾರಾಜರ ಸ್ಮರಣ ಮಾಡುತ್ತಿದ್ದದರಿಂದ ಅವನನ್ನು ತಮ್ಮ ಭಕ್ತನೆಂದೇ ಅವರು ತಿಳಿದಿದ್ದರು. ನಿಜವಾದ ಸಜ್ಜನರೊಡನೆ ಸಖ್ಯಬೆಳೆಸಿದರೂ ಮನುಷ್ಯನಿಗೆ ಕಲ್ಯಾಣವಾಗುವದು. ವಿರೋಧ ಬೆಳೆಸಿದರೂ ಕಲ್ಯಾಣವಾಗುವದು. ಸಜ್ಜನರು ಯಾರಿಗೂ ಕೆಡಕು ಮಾಡುವದಿಲ್ಲ. ಅದರಂತೆ ಬ್ರಹ್ಮಚೈತನ್ಯ ಮಹಾರಾಜರವರು ಆ ನಿಂದಕ ಗೃಹಸ್ಥನನ್ನು ಉದ್ಧರಿಸಬೇಕೆಂದು ಬುದ್ಧಿಪೂರ್ವಕವಾಗಿ ಅವನ ಊರಿಗೆ ಹೋದರು. ಆ ನಿಂದಕನಿಗೆ ಮತ್ತಿಷ್ಟು ದ್ವೇಷ ಉತ್ಪನ್ನವಾಯಿತು. ಈಗ ಅವನು ಇವರಲ್ಲಿ ಅಂಥ ಮಹತ್ವವು ಇರುವದಾದರೂ ಏನು! ಎಂದು ಅವರನ್ನು ಪರೀಕ್ಷಿಸುವದಕ್ಕೆ ಹೋದನು. ಮತ್ತು ಮಹಾರಾಜರಿಗೆ ನಮಸ್ಕಾರಾದಿಗಳನ್ನೇನೂ ಮಾಡದೆ ಅವರ ಹತ್ತರ ಕುಳಿತು. ನಿಮ್ಮ ಹತ್ತರ ಯಾವ ಶಕ್ತಿಯಿದೆ! ಜನರನ್ನು ಮರುಳುಮಾಡಿ ಅಡ್ಡದಾರಿಗೆ ಹಚ್ಚುವಿರಿ. ಆದರೆ ಇಂಥದಕ್ಕೆ ನಾನು ಮರುಳಾಗುವದಿಲ್ಲ. ನಿಮ್ಮಲ್ಲಿ ಅಂಥ ಅಲೌಕಿಕ ಸಾಮರ್ಥ್ಯವೇನಿದೆಯೋ ಅದನ್ನು ತೋರಿಸಿದರೆ ನಾನು ನಿಮ್ಮ ಸಾಧುತ್ವವನ್ನು ಒಪ್ಪಿಕೊಳ್ಳುವೆನು, ಎಂದು ನುಡಿದನು. ವಾಸ್ತವವಾಗಿ ವಿಚಾರಿಸಿದರೆ ಆ ಗೃಹಸ್ಥನಿಗೆ ಶುದ್ಧ ಮೂರ್ಖನೆನ್ನಬೇಕು. ಮಹಾತ್ಮನ ಮುಂದೆ ಸಕಲ ಸಿದ್ಧಿಗಳು ಕೈಮುಗಿದುಕೊಂಡು ನಿಂತಿರುವವೋ? ಅಂಥ ಮಹಾತ್ಮನ ಅಲೌಕಿಕ ಶಕ್ತಿಯನ್ನು ಅದಾವನು ಪರೀಕ್ಷಿಸುವನು! ಅವನ ಮಾತು ಕೇಳಿ ಮಹಾರಾಜರು ನಕ್ಕರು; ಮತ್ತು ವಿನಯದಿಂದ— ಗೃಹಸ್ಥನೇ, ನಿನಗೆ ನನ್ನ ಅಲೌಕಿಕ ಸಾಮರ್ಥ್ಯವನ್ನು ನೋಡುವ ಇಚ್ಛೆಯಾಗಿದೆಯೋ? ಆದರೆ ನಾನು ಅಲೌಕಿಕ ಪುರುಷನಲ್ಲ. ಶ್ರೀರಾಮನ ಚರಣದಾಸನಿದ್ದೇನೆ. ಶ್ರೀರಾಮನೇ ನಿನಗೆ ಅಲೌಕಿಕ ಸಾಮರ್ಥ್ಯವನ್ನು ತೋರಿಸಬಹುದು. ನಾಳೆಗೆ ಶ್ರೀರಾಮನ ಅಲೌಕಿಕ ಸಾಮರ್ಥ್ಯದ ಅನುಭವವು ನಿನಗೆ ಬರಬಹುದು; ಎಂದು ಹೇಳಿದರು. ಆ ಗೃಹಸ್ಥನಿಗೆ ಈ ಬಗೆಯ ಮಾತುಗಳಿಂದ ಆರ್ಧ

ಮರ್ಧನ ಮುಖಭಂಗವಾದಂತಾಯಿತು. ಮಹಾರಾಜರು ಒಣ ಹೆಮ್ಮೆಯನ್ನು ಒಡೆಯುವವರಲ್ಲವೆಂಬುದು ಅವನ ಅನುಭವಕ್ಕೆ ಬಂದಿತು. ಅವನು ಹಾಗೇ ಸುಮ್ಮನೆ ಮನೆಗೆ ಹೊರಟು ಹೋದನು. ಮರುದಿನ ಅವನಿಗೆ ಭಯಂಕರವಾದ ಹೊಟ್ಟೆಶೂಲಿಯೆದ್ದಿತು. ಇದರಿಂದ ಅವನ ಪ್ರಾಣೋತ್ಕ್ರಮಣವಾಗುತ್ತದೋ ಏನೋ ಅನ್ನುವಂತೆ ವ್ಯಥೆಯಾಗತೊಡಗಿತು. ಬ್ರಾಹ್ಮಣನು ಒದ್ದಾಡತೊಡಗಿದನು. ಯಾವ ಔಷಧ ಕುಡಿದರೂ ಅವನಿಗೆ ಸಮಾಧಾನವು ಆಗದಾಯಿತು. ಒರಬರುತ್ತ ವ್ಯಥೆಯು ಹೆಚ್ಚತೊಡಗಿತು. ಒಂದೆರಡು ತಾಸುಗಳಲ್ಲಿಯೇ ಅವನು ಹೈರಾಣಾದನು. ಇನ್ನು ಮುಂದೆ ತನ್ನ ಪ್ರಾಣವು ಉಳಿಯದೆಂದು ಅವನು ಖಂಡಿತವಾಗಿ ತಿಳಿದನು. ಬಳಿಕ ಅವನು ಮಹಾರಾಜರ ಬಳಿಗೆ ಕರೆದುಕೊಂಡು ಹೋಗಲು ತನ್ನ ಮಕ್ಕಳಿಗೆ ಹೇಳಿದನು. ಮನೆಯವರೆಲ್ಲರೂ ಹೌಹಾರಿ ಹೋಗಿದ್ದರು. ಅವನನ್ನು ಒಂದು ತೊಟ್ಟಿಲಲ್ಲಿ ಕೂಡ್ರಿಸಿ ಹೊತ್ತುಕೊಂಡು ಮಹಾರಾಜರ ಬಳಿಗೆ ಹೋದರು. ಅವನು ಮಹಾರಾಜರ ಚರಣಗಳನ್ನು ಹಿಡಿದು ಕ್ಷಮಿಸಬೇಕೆಂದಿಷ್ಟೇ ನುಡಿದನು. ಹೊಟ್ಟೆಕಡತವು ಹೆಚ್ಚುತ್ತಲೇ ಇತ್ತು. ಆಗ ಮಹಾರಾಜರು ಗೃಹಸ್ಥನೇ, ಇದು ರಾಮನ ಅಲೌಕಿಕ ಶಕ್ತಿಯು, ಬೇಕಾದರೆ ಇನ್ನಷ್ಟು ಪರೀಕ್ಷಿಸು ಎಂದು ನುಡಿದರು. ಗೃಹಸ್ಥನು ಕಣ್ಣಿಗೆ ನೀರು ತಂದು ಕೇವಲ ಕೈಸನ್ನೆಯಿಂದಲೇ ಒಡವನನ್ನುದ್ಧರಿಸಬೇಕೆಂದು ಬೇಡಿಕೊಂಡನು. ಆಗ ಮಹಾರಾಜರು ದಯಾವಂತರಾಗಿ ಶ್ರೀರಾಮ ಎಂದು ಉಚ್ಚರಿಸು ಎಂದು ಹೇಳಿದರು. ಹಾಗೆ ಆತನು ಉಚ್ಚರಿಸಿದ ಕೂಡಲೆ ಅವನ ವ್ಯಥೆಯೆಲ್ಲ ಅಳಿದು ಹೋಯಿತು. ಅವನು ನಿರಾಮಯನಾದನು.

ಈ ಚಮತ್ಕಾರವನ್ನು ನೋಡಿ ಸಕಲರಿಗೂ ಆಶ್ಚರ್ಯವಾಯಿತು. ಆ ನಿಂದಕನು ಮಹಾರಾಜರನ್ನು ಪ್ರತ್ಯಕ್ಷ ದೇವರೆಂದೇ ಭಾವಿಸಿದನು. ಅಂದಿನಿಂದ ಆತನು ಮಹಾರಾಜರ ಭಕ್ತನಾದನು. ಮೊದಲೇ ಸದಾ

ಚಾರ ಸಂಪನ್ನನಾದ ಆ ಗೃಹಸ್ಥನು ಮಹಾರಾಜರ ಭಕ್ತನಾದ್ದರಿಂದ ವಿಶೇಷ ಗೌರವವನ್ನು ಹೊಂದಿದನು. ನಿಜವಾದ ಸತ್ಪುರುಷರೊಡನೆ ಹ್ಯಾಗೆ ನಡೆದುಕೊಂಡರೂ ಕಲ್ಯಾಣವಾಗುವದು. ಸಕ್ಕರೆಯನ್ನು ಪ್ರೀತಿಸಿ ತಿಂದರೂ ಸುಖವಾಗುವದು; ಅರಿದು ತಿಂದರೂ ಸುಖವಾಗುವದು.

---

## ೧೬ನೆಯ ಅಧ್ಯಾಯ:— ಪುತ್ರಪ್ರದಾನ.



ಮಹಾರಾಜರವರು ಒಮ್ಮೆ ಬೆಳಗಾವಿಯಿಂದ ಹೊರಟು ಗೋಂದಾವಲಿಗೆ ಹೋಗಬೇಕೆಂದು ಕೋರೆಗಾಂವ ಸ್ಟೇಶನಕ್ಕೆ ಬಂದರು. ರೈಲುಬಂಡಿಯು ಬಹಳ ತಡವಾಗಿ ಬಂದದ್ದರಿಂದ ಊಟಮಾಡದೆ ಮುಂದಕ್ಕೆ ಹೋಗುವಂತಿರಲಿಲ್ಲ. ಅಲ್ಲಿಯ ಸ್ಟೇಶನ್ನ ಮಾಸ್ತರನು ಬ್ರಾಹ್ಮಣನಿದ್ದು, ಒಳ್ಳೇ ಭಾವಿಕನಿದ್ದನು. ಅವನು ಅನಾಯಾಸವಾಗಿ ಬಂದ ಈ ಅಥಿತಿಗಳನ್ನು ಬಿಡಲಿಲ್ಲ. ಮಹಾರಾಜರು ಆತನ ಆಗ್ರಹವನ್ನು ನೋಡಿ ಅಂದಿನ ಮಧ್ಯಾಹ್ನವನ್ನು ಅಲ್ಲಿಯೇ ಕಳೆಯುವದನ್ನು ನಿಶ್ಚಯಿಸಿದರು. ತನ್ನ ಆಮಂತ್ರಣಕ್ಕೆ ಮಹಾರಾಜರು ಒಪ್ಪಿಕೊಂಡರೆಂದು ಸ್ಟೇಶನ್ನಮಾಸ್ತರನು ಬಹು ಸಂತೋಷಪಟ್ಟು, ಬಗೆಬಗೆಯ ಪಕ್ವಾನ್ನಗಳನ್ನು ಮಾಡಿಸಿದನು. ಅಡಿಗೆಯು ಸಿದ್ಧವಾದ ಬಳಿಕ ಮಹಾರಾಜರು ಮಡಿಕಫನಿಯನ್ನು ತೊಟ್ಟುಕೊಂಡು ಮಣೆಯ ಮೇಲೆ ಕುಳಿತರು. ಸ್ಟೇಶನ್ನ ಮಾಸ್ತರನು ಬಹು ಸಂಭ್ರಮದಿಂದ ಮಹಾರಾಜರ ಪಾದಪೂಜೆಯನ್ನು ಮಾಡಿದನು. ಆತನ ಸದ್ಭಕ್ತಿಯನ್ನು ನೋಡಿ ಮಹಾರಾಜರು ಸಂತುಷ್ಟರಾದರು. ಬಳಿಕ ಮಹಾರಾಜರ ಸಂಗಡ ಎಲ್ಲ ಪರಿವಾರದ ಊಟವಾಯಿತು. ಸ್ಟೇಶನ್ನ ಮಾಸ್ತರನು ಬಹು ಆದರದಿಂದ ಎಲ್ಲರಿಗೂ ಉಣಬಡಿಸಿದನು. ಎಲ್ಲರ ಊಟವಾದ ಬಳಿಕ ಸ್ಟೇಶನ್ನ ಮಾಸ್ತರನು ಉಂಡನು. ಬಳಿಕ ಆತನ ಹೆಂಡತಿಯು ಉಂಡಳು.

ಈ ಮೇರೆಗೆ ಸ್ವೇತನ್ನ ವಾಸ್ಕರನು ಸದ್ಭಾವದಿಂದ ಆತಿಥ್ಯ ಮಾಡಿದ್ದನ್ನು ನೋಡಿ ಮಹಾರಾಜರಿಗೆ ತುಂಬಾ ಸಂತೋಷವಾಯಿತು. ದೊಡ್ಡವರು ಸದ್ಭಾವವನ್ನು ನೋಡುವರಲ್ಲದೆ, ಬೇರೆ ಏನನ್ನೂ ನೋಡುವದಿಲ್ಲ. ತಮ್ಮ ಕಡೆಗೆ ಬಂದ ಮನುಷ್ಯನು ಎಷ್ಟು ಶ್ರೀಮಂತನಿರುವನೆಂಬದನ್ನು ನೋಡುವದಿಲ್ಲ; ಎಷ್ಟು ವಿದ್ಯಾವಂತನಿರುವನೆಂಬದನ್ನು ನೋಡುವದಿಲ್ಲ; ಎಂಥ ದೊಡ್ಡ ಹುದ್ದೆಯ ಮೇಲಿರುವನೆಂಬದನ್ನು ನೋಡುವದಿಲ್ಲ. ಅತನಲ್ಲಿ ಸದ್ಭಾವವು ಎಷ್ಟರಮಟ್ಟಿಗೆ ಇರುವುದೆಂಬದನ್ನು ಮಾತ್ರ ನೋಡುತ್ತಾರೆ. ಯಾವನು ಸದ್ಭಾವನೆಯುಳ್ಳವನಿರುವನೋ ಅವನಿಗೆ ಕೂಡಲೆ ಅನುಗ್ರಹಮಾಡುವರು. ಸದ್ಭಾವವಿಲ್ಲದವರು ಎಷ್ಟು ದುಡ್ಡು ಖರ್ಚು ಮಾಡಿದರೂ ಎಷ್ಟು ಬೇಡಿಕೊಂಡರೂ ಅವರು ಅನುಗ್ರಹಮಾಡುವದಿಲ್ಲ. ಸದ್ಭಕ್ತರು ಬೇಡಿಕೊಳ್ಳುವದೇ ಅವಶ್ಯವಿಲ್ಲ. ಒಂದು ವೇಳೆ ಬೇಡಿಕೊಂಡರೂ ಸಜ್ಜನರು ಆ ಕೂಡಲೆ ಅವರ ಮನೋಬಯಕೆಗಳನ್ನು ಪೂರೈಸುವರು. ಸಜ್ಜನರ ಕಡೆಗೆ ಶರಣು ಹೋಗತಕ್ಕವರು ಈ ಮಾತನ್ನು ಯಾವಾಗಲೂ ಲಕ್ಷದಲ್ಲಿಡಬೇಕು. ಕಾಮನಾಪರ ಭಕ್ತರೂ ಸಹ ಈ ಮಾತನ್ನು ಮರೆಯಲಾಗದು. ಮೋಕ್ಷಸಿದ್ಧಿಯಾಗಲಿ, ಅಥವಾ ಇಹದಲ್ಲಿ ಕಾಮನಾಸಿದ್ಧಿಯಾಗಲಿ ಆಗಬೇಕಾದರೆ ಗುರುಭಕ್ತನಾದವನಲ್ಲಿ ಸದ್ಭಕ್ತಿಯು ಇರಲೇಬೇಕು. ಸದ್ಭಕ್ತಿಯಿಲ್ಲದೆ ಅವರಿಗೆ ಫಲವು ದೊರೆಯಲಾರದು. ಎಷ್ಟೋ ಜನರು ಈ ಸಾಧುಗಳು ಮಹಿಮಾವಂತರು, ಆ ಸಾಧುಗಳು ಮಹಿಮಾಶಾಲಿಗಳು. ಅವರು ಸತ್ತವರನ್ನು ಬದುಕಿಸಿದರು. ಇವರು ಹೀಗೆ ಮಾಡಿದರು. ಹಾಗೆ ಮಾಡಿದರು ಎಂದು ನುಡಿಯುತ್ತ ಎಲ್ಲೆಲ್ಲಿ ಸಾಧುಗಳಿರುವರೋ ಅಲ್ಲಲ್ಲಿಗೆ ಹೋಗಿ ತಮ್ಮ ಮನೋಬಯಕೆಗಳು ಪೂರ್ತಿಯಾಗಲೆಂದು ಬೇಡಿಕೊಳ್ಳುವರು. ಸುಮ್ಮನೆ ಬೇಡಿಕೊಂಡ ಮಾತ್ರಕ್ಕೆ ಮನೋಬಯಕೆಯು ಪೂರ್ಣವಾಗುವದೇ! ನಿಜವಾದ ಸಜ್ಜನರೆಲ್ಲರೂ ಮಹಿಮಾವಂತರೇ ಇರುವರು. ಆದರೆ ಸಜ್ಜನರು ಸಂತೋ

ಮೆಯನ್ನು ಕೇಳಿ ಶರಣು ಬಂದಿರುವೆವು. ನಮಗೆ ಸಂತತಿಯನ್ನು ಕೊಡುವ ಕೃಪೆಮಾಡಬೇಕು. ಭಕ್ತವತ್ಸಲನಾದ ನಿನಗೆ ಯಾವದೂ ಅಸಾಧ್ಯವಲ್ಲ ಎಂದು ನುಡಿದರು. ಅವರ ಮಾತನ್ನು ಕೇಳಿ ಸ್ವಾಮಿಯು ಬೇರೆ ಮಾತನ್ನಾಡದೆ ಶಿಷ್ಯರ ಕಡೆಯಿಂದ ಎರಡು ಬೊಗಸೆ ಹುರಿದ ಕಡಲೆಯನ್ನು ತರಿಸಿ ಅವರಿಬ್ಬರ ಉಡಿಯಲ್ಲಿಯೂ ಒಂದೊಂದು ಬೊಗಸೆಯಂತೆ ಹಾಕಿಸಿದರು. ಮತ್ತು ನುಡಿದರೇನಂದರೆ - ತಾಯಿಗಳಿರಾ, ನೀವು ಈ ಕಡಲೆಯನ್ನು ತಿನ್ನುತ್ತ ಶ್ರೀರಾಮ ದೇವರಿಗೆ ಪ್ರದಕ್ಷಿಣೆಯನ್ನು ಹಾಕಿರಿ. ಕಡಲೆ ತೀರುವವರೆಗೂ ಪ್ರದಕ್ಷಿಣೆ ಹಾಕತಕ್ಕದ್ದು, ನಡುವೆ ಯಾವ ಹುಡುಗರು ಬಂದು ಕೇಳಿದರೂ ಅವಕ್ಕೆ ಉಡಿಯಲ್ಲಿದ್ದ ಕಡಲೆಯನ್ನು ಕೊಡಕೂಡದು. ಕಡಲೆ ತೀರಿದನಂತರ ನೀವು ನನ್ನ ಬಳಿಗೆ ಬರ್ರಿ ಮುಂದೆ ನಿಮಗೆ ಸಂತತಿಯ ವಿಷಯವಾಗಿ ಹೇಳುವೆನು.

ಈ ಮೇರೆಗೆ ಸ್ವಾಮಿಯ ಅಪ್ಪಣೆಯನ್ನು ಕೇಳಿ ಆ ಇಬ್ಬರೂ ಹೆಂಗಸರು ಬಹು ಸಂತೋಷಹೊಂದಿ ಉಡಿಯಲ್ಲಿದ್ದ ಕಡಲೆಯನ್ನು ತಿನ್ನುತ್ತ ಗುಡಿಗೆ ಪ್ರದಕ್ಷಿಣೆ ಹಾಕಲಾರಂಭಿಸಿದರು. ಇತ್ತ ಮಹಾಸ್ವಾಮಿಯು ಸಣ್ಣ ಸಣ್ಣ ಹುಡುಗರನ್ನು ಕರೆದು ಅವರಿಗೆ ಆ ಕಡಲೆತಿನ್ನುವ ಹೆಂಗಸರನ್ನು ತೋರಿಸಿ, ಅವರ ಬಳಿಯಲ್ಲಿ ಹೋಗಿ ತಿನ್ನಲಿಕ್ಕೆ ಕಡಲೆಯನ್ನು ಬೇಡಿರೆಂದು ಹೇಳಿದರು. ಹುಡುಗರಿಗೆ ತಿನ್ನುವ ಪದಾರ್ಥದ ವಿಷಯವೆಂದರೆ ಹಬ್ಬವೆಂಬದನ್ನು ಬರೆಯಲೇಬೇಡ. ಹತ್ತಿಪ್ಪತ್ತು ಹುಡುಗರು ಆ ಹೆಂಗಸರ ಬಳಿಗೆ ಹೋಗಿ ನಮಗಷ್ಟು ಕಡಲೆಯನ್ನು ಕೊಡು ಎಂದು ಗಂಟುಬಿದ್ದವು. ಮೂರು ನಾಲ್ಕು ವರ್ಷಗಳ ಸಣ್ಣ ಮಕ್ಕಳು ಹೀಗೆ ಅಂಗಲಾಚಿ ಬೇಡುವದನ್ನು ನೋಡಿ ಆ ಹೆಂಗಸರಲ್ಲಿ ಒಬ್ಬಳಿಗೆ ದಯ ಉತ್ಪನ್ನವಾಯಿತು. ಆದರೂ ಅವಳು ಚಿದಂಬರ ಮಹಾಸ್ವಾಮಿಯು ಯಾರಿಗೂ ಕೊಡಬೇಡವೆಂದು ಹೇಳಿದ್ದರಿಂದ ನಿರುಪಾಯಳಾಗಿ ಆ ಹುಡುಗರಿಗೆ ಕೊಡದೆ ಹಾಗೇ ಪ್ರದಕ್ಷಿಣೆ ಹಾಕತೊಡಗಿದಳು. ಈ [illegible]

ಬೆನ್ನ ಹತ್ತಿದವು. ಆ ಹುಡುಗರನ್ನು ತಿರಸ್ಕರಿಸುವದು ಆಕೆಗೆ ಅಶಕ್ಯವಾಯಿತು. ಅವಳು ಭೂತದಯಾಪರಳೂ ಕೋಮಲ ಮನಸ್ಸಿನವಳೂ, ಮಕ್ಕಳ ಮೇಲೆ ಮಮತೆ ಮಾಡುವವಳೂ ಆದ್ದರಿಂದ ಆಕೆಗೆ ಆ ಹುಡುಗರ ಬಾಯಿ ಹಾರಿ ಹೊಡೆದು ತಾನೊಬ್ಬಳೇ ತಿನ್ನುವದು ಅಶಕ್ಯವಾಯಿತು. ಆಗ ಅವಳು ಮನಸ್ಸಿನಲ್ಲಿ—ಈ ಹುಡುಗರಿಗೆ ಕಡಲೆಯನ್ನು ಕೊಟ್ಟರೆ ಸ್ವಾಮಿಯ ಅಪ್ಪಣೆಯನ್ನು ಮೀರಿದಂತಾಗುವದು. ಈ ಹುಡುಗರಿಗೆ ಕಡಲೆಯನ್ನು ಕೊಟ್ಟರೆ ನನಗೆ ಮಕ್ಕಳು ಆಗಲಿಕ್ಕಿಲ್ಲ. ನನಗೆ ಮಕ್ಕಳು ಆಗದಿದ್ದರೂ ಚಿಂತೆಯಿಲ್ಲ. ಈಗ ಅಂಗಲಾಚಿ ಬೇಡಿಕೊಳ್ಳುತ್ತಿರುವ ಈ ಸಣ್ಣ ಮಕ್ಕಳು ಸಂತೋಷಪಟ್ಟರೆ ಸಾಕು ಇವೇ ನನ್ನ ಮಕ್ಕಳು. ಇವನ್ನು ಬಿಟ್ಟು ನನಗೆ ತಿನ್ನುವದಾಗದು ಎಂದು ಯೋಚಿಸಿ ಎಲ್ಲ ಹುಡುಗರಿಗೂ ಹಂಚಿ ಬರಿಗೈಯವಾದಳು. ಆದರೆ ಇನ್ನೊಬ್ಬ ಹೆಣ್ಣುಮಗಳಿಗೆ ಈಕೆಯ ವೃತ್ತಿಯು ಸರಿ ಬರಲಿಲ್ಲ. ಆಕೆಯು ಪಾಷಾಣ ಹೃದಯದವಳಿದ್ದಳು. ಭೂತದಯೆಯೆಂಬದು ಆಕೆಗೆ ಎಂಥದೋ ಗೊತ್ತಿರಲಿಲ್ಲ. ಆದ್ದರಿಂದ ಅವಳು ತನ್ನನ್ನು ಬೆನ್ನಟ್ಟಿರುವ ಯಾವ ಹುಡುಗರನ್ನೂ ಆಕೆಯು ಲೆಕ್ಕಿಸಲಿಲ್ಲ. ಸಣ್ಣ ಮಕ್ಕಳು ಅಳುತ್ತಿರುವವು ಅವನ್ನು ಬಿಟ್ಟು ಹ್ಯಾಗೆ ತಿನ್ನಬೇಕೆಂಬ ವಿಚಾರವೂ ಅವಳಲ್ಲಿ ಬರಲಿಲ್ಲ. ಮಹಾಸ್ವಾಮಿಯು ಒಬ್ಬರಿಗೂ ಒಂದು ಕಾಳು ಕೊಡದೆ ತಿನ್ನಬೇಕೆಂದು ಆಜ್ಞೆ ಮಾಡಿರುವನು. ಈ ಹುಡುಗರಿಗೆ ಕೊಟ್ಟರೆ ನನಗೆ ಮಕ್ಕಳು ಆಗಲಿಕ್ಕಿಲ್ಲ. ನನ್ನ ಜತೆಗಾರ್ತಿಯು ಎಲ್ಲವನ್ನೂ ಹುಡುಗರಿಗೆ ಕೊಟ್ಟುಬಿಟ್ಟಳು. ಆಕೆಯು ಸ್ವಾಮಿಯಿಂದ ಬೈಸಿಕೊಂಡು ಮನೆಗೆ ಹೋಗುವಳು. ನನಗೆ ಸಂತತಿಯಾಗುವದು. ಸ್ವಾಮಿಯು ನನಗೆ ಅನುಗ್ರಹ ಮಾಡುವನು ಎಂದು ಉಬ್ಬುಬ್ಬಿ ಎಲ್ಲ ಹುಡುಗರನ್ನೂ ಹೊಡೆದೋಡಿಸಿ ಎಲ್ಲ ಕಡಲೆಯನ್ನು ತಾನೇ ತಿಂದಳು. ಬಳಿಕ ಇಬ್ಬರೂ ಮಹಾಸ್ವಾಮಿಯ ಬಳಿಗೆ ಹೋದರು.

ಸರ್ವಜ್ಞನಾದ ಸ್ವಾಮಿಯು ಎಲ್ಲವನ್ನೂ ತಿಳಿದವನಾಗಿದ್ದನು.

ಆದರೂ ಲೌಕಿಕಾರ್ಥವಾಗಿ—ತಾಯಿಗಳಿರಾ, ಕಡಲೆಯನ್ನು ನೀವೇ ತಿಂದಿರಾ, ಅಥವಾ ಯಾರಿಗಾದರೂ ಕೊಟ್ಟಿರಾ, ಎಂದು ಕೇಳಿದನು. ಆಗ ಮೊದಲನೇ ಸ್ತ್ರೀಯು,—ಸ್ವಾಮೀ ನಾನು ಅಪರಾಧಿನಿಯಿದ್ದೇನೆ. ಹುಡುಗರು ದುಂಬಾಲ ಬಿದ್ದು ಕೇಳಲು ಅವರನ್ನು ಬಿಟ್ಟು ತಿನ್ನಲಿಕ್ಕೆ ನನಗಾಗಲಿಲ್ಲ. ಆದ್ದರಿಂದ ನಾನು ಎಲ್ಲ ಕಡಲೆಯನ್ನು ಹುಡುಗರಿಗೆ ಕೊಟ್ಟುಬಿಟ್ಟೆನು. ನಾನು ನಿಮ್ಮ ಅಪ್ಪಣೆಯನ್ನು ಮೀರಿದ್ದರಿಂದ ಕ್ಷಮೆಯನ್ನು ಬೇಡುತ್ತೇನೆ. ನನಗೆ ಮಕ್ಕಳೇ ಬೇಡ ಎಂದಳು. ಆಗ ಮಹಾಸ್ವಾಮಿಯು ನಕ್ಕು ಮತ್ತೊಬ್ಬಳನ್ನು ಕೇಳಿದನು, ಆಗ ಆಕೆಯು—ಸ್ವಾಮೀ ನಾನು ತಮ್ಮ ಅಪ್ಪಣೆಯನ್ನು ಸ್ವಲ್ಪ ಮೀರಲಿಲ್ಲ. ಯಾವ ಹುಡುಗರಿಗೂ ಒಂದು ಕಾಳು ಕೊಡದೆ ಎಲ್ಲ ಕಡಲೆಯನ್ನು ನಾನೊಬ್ಬಳೇ ತಿಂದೆನು ಎಂದು ನುಡಿದಳು. ಇವರಿಬ್ಬರ ಈ ಬಗೆಯ ಉತ್ತರಗಳನ್ನು ಕೇಳಿ ಮಹಾಸ್ವಾಮಿಯು ಏನು ನಿರ್ಣಯ ಹೇಳುವನೋ ಎಂದು ಜನರು ಬೆರಗಾಗಿ ನೋಡ ತೊಡಗಿದರು. ಪ್ರಿಯವಾಚಕರೇ, ಈ ಸಂದರ್ಭದಲ್ಲಿ ಮಹಾಸ್ವಾಮಿಯು ಏನು ಉತ್ತರ ಹೇಳಬಹುದು?

ಆಗ ಚಿದಂಬರ ಮಹಾಸ್ವಾಮಿಯು ಮುಗುಳುನಗೆ ನಗುತ್ತ ಮೊದಲನೇ ಸ್ತ್ರೀಯನ್ನು ಕುರಿತು ಇಂತು ನುಡಿದನು—"ತಾಯಿ, ನೀನು ನಿಜವಾದ ಭೂತದಯಾಪರಳಿರುವಿ. ನಿನ್ನ ಮನಸ್ಸು ಕೋಮಲವಿದೆ; ನಿಜವಾದ ಭಕ್ತಿಯು ನಿನ್ನಲ್ಲಿದೆ; ಕೇವಲ ಸ್ವಾರ್ಥಪರಾಯಣತೆಯು ನಿನ್ನಲ್ಲಿಲ್ಲ; ನಿನ್ನ ಅತುಲವಾದ ಭೂತದಯೆಯು ನನ್ನ ಅಪ್ಪಣೆಯನ್ನು ಕೂಡ ಲೆಕ್ಕಿಸಲಿಲ್ಲ. ಇಂಥ ದಯಾವಂತಳಾದ ನಿನಗೆ-ಪುತ್ರವಾತ್ಸಲ್ಯವುಳ್ಳವಳಾದ ನಿನಗೆ-ಪರಮೇಶ್ವರನು ಮಕ್ಕಳನ್ನು ನಿಶ್ಚಯವಾಗಿ ದಯಪಾಲಿಸುವನು. ನೀನು ಪುತ್ರವತಿಯಾಗುವಿ."

ಈ ಪ್ರಕಾರ ಮೊದಲನೆಯವಳಿಗೆ ಹೇಳಿ, ಮತ್ತೊಬ್ಬಳನ್ನು ಕುರಿತು ಹೀಗೆ ಹೇಳಿದನು—"ತಾಯಿ, ನೀನು ನನ್ನ ಅಪ್ಪಣೆ ಪಾಲಿಸಿದೆ

ಯಾದರೂ ನೀನು ಕೇವಲ ಕಠೋರ ಹೃದಯಳಿರುವಿ. ಭೂತದಯೆಯು ನಿನ್ನಲ್ಲಿ ಕಿಂಚಿತ್ತಾದರೂ ಇಲ್ಲ. ನಿಜವಾದ ಭೂತದಯೆ ಇಲ್ಲದವರಮೇಲೆ ಪರಮೇಶ್ವರನ ಅನುಗ್ರಹವಾಗದು. ದಯಾಪರರಾದವರೇ ಭಕ್ತರಾಗಲಿಕ್ಕೆ ಯೋಗ್ಯರು. ಪಾಷಾಣ ಹೃದಯರೂ ಕಠೋರ ಸ್ವಭಾವದವರೂ ನಿಗ್ರಹಕ್ಕೆ ಪಾತ್ರರಾಗುವರು. ಆದ್ದರಿಂದ ಪರಮೇಶ್ವರನು ನಿನಗೆ ಸಂತತಿಯನ್ನು ಕೊಡಲಾರನು.''

ಈ ಮೇರೆಗೆ ಸ್ವಾಮಿಯ ವಚನವನ್ನು ಕೇಳಿ ನೆರೆದವರೆಲ್ಲರೂ ಬೆರಗಾದರು. ಆ ಸ್ತ್ರೀಯು ಎಷ್ಟು ಬಗೆಯಾಗಿ ಹೇಳಿಕೊಂಡರೂ ಪ್ರಯೋಜನವಾಗಲಿಲ್ಲ. ಆಗ ನೆರೆದವರಿಗೆ ಭಗವದ್ದಯೆಯು ಹ್ಯಾಗಾದರೆ ಪ್ರಾಪ್ತವಾಗುತ್ತದೆಂಬುದು ಚನ್ನಾಗಿ ಲಕ್ಷದಲ್ಲಿ ಬಂದಿತು.

ಪ್ರಿಯವಾಚಕರೆ, ದೊಡ್ಡವರು ಏನನ್ನು ಪರೀಕ್ಷಿಸುತ್ತಾರೆಂಬದು ನಿಮ್ಮ ಲಕ್ಷದಲ್ಲಿ ಬಂದಿರಬಹುದಲ್ಲವೇ? ಅಂಥ ಭೂತದಯೆಯು ನಿಜವಾದ ಭಕ್ತಿಯು ಕಂಡುಬಂದಲ್ಲಿ ಅವರು ತಾವಾಗಿಯೇ ಅನುಗ್ರಹಿಸುವರು. ಪ್ರಸ್ತುತದಲ್ಲಿ ಶ್ರೀ ಬ್ರಹ್ಮಚೈತನ್ಯ ಮಹಾರಾಜರೂ ಆ ಸ್ಟೇಶನ್ನ ಮಾಸ್ತರನ ವಿಷಯವಾಗಿ ಸುಪ್ರಸನ್ನಚಿತ್ತರಾದರು. ಆತನನ್ನು ಅನುಗ್ರಹಿಸಬೇಕೆಂದು ಇಚ್ಛಿಸಿದರು. ದೊಡ್ಡವರ ಸಂತೋಷವೇ ಅನುಗ್ರಹವು; ದೊಡ್ಡವರ ಅಸಂತೋಷವೇ ನಿಗ್ರಹವು. ಇದರ ಹೊರತು ನಿಗ್ರಹಾನುಗ್ರಹವೆಂಬವುಗಳು ಬೇರೆ ಇರುವದಿಲ್ಲ. ಸ್ಟೇಶನ್ನ ಮಾಸ್ತರನು ಮಧ್ಯಮವಯಸ್ಸಿನವನಿದ್ದನು. ಆತನ ಹೆಂಡತಿಯು ಪ್ರಬುದ್ಧಳಾಗಿ ಎಷ್ಟೋ ವರುಷಗಳಾಗಿದ್ದವು. ಅವರಿಗೆ ಸಂಪತ್ತಿದ್ದರೂ ಸಂತತಿಯಿಲ್ಲದ್ದರಿಂದ ಅದೆಲ್ಲ ವ್ಯರ್ಥವಾಗಿತ್ತು. ಆ ದಂಪತಿಗಳು ಸಂತತಿಯ ವಿಷಯವಾಗಿ ಸರ್ವದಾ ಚಿಂತಿಸುತ್ತಿದ್ದರು. ಆದರೂ ಅವರು ಯಾವ ಸಾಧುಗಳಲ್ಲಿಯೂ ಹೋಗಿ ಪುತ್ರಯಾಚನೆಯನ್ನು ಮಾಡಿರಲಿಲ್ಲ. ನಿಜವಾದ ಭೂತದಯಾಪರರೂ ಸದ್ಭಕ್ತರೂ ಆಗಿ ಕಾಲಕಳೆಯುತ್ತಿದ್ದರು.

ಮಹಾರಾಜರು ಊರಿಗೆ ಹೊರಡುವ ಹೊತ್ತಾಯಿತು. ಬಂಡಿಗ ಳೆಲ್ಲವೂ ಸಿದ್ಧವಾದವು. ಸ್ಟೇಶನ್ನ ಮಾಸ್ತರನು ಮಹಾರಾಜರನ್ನು ನಮ ಸ್ಕರಿಸ ಬಂದನು. ಆತನ ಹೆಂಡತಿಯೂ ನಮಸ್ಕರಿಸ ಬಂದು ಮಹಾರಾ ಜರ ಚರಣಗಳ ಮೇಲೆ ಹಣೆ ಇಟ್ಟು ನಮಸ್ಕರಿಸಿ ತನ್ನ ಕೈಯೊಳಗಿನ ಒಂದು ಚಿನ್ನದ ಪಾಟ್ಲಿಯನ್ನು ಬಿಚ್ಚಿ ಮಹಾರಾಜರ ಸನ್ನಿಧಿಯಲ್ಲಿ ದಕ್ಷಿ ಣೆಯೆಂದು ಸಮರ್ಪಿಸಿದಳು. ಮಹಾರಾಜರು ಮುಗುಳು ನಗೆ ನಕ್ಕು— ತಾಯೀ, ಈ ಪಾಟ್ಲಿಯು ದಕ್ಷಿಣೆಯ ರೂಪದಿಂದ ನಮಗೆ ಮುಟ್ಟಿತು. ಆದರೆ ಇದನ್ನು ನಿನ್ನ ಮಗನಿಗೆ ಅಸಲಿಯನ್ನು ಮಾಡಿಸುವದಕ್ಕಾಗಿ ನಿನಗೆ ತಿರುಗಿ ಕೊಡುತ್ತೇನೆ ಇದನ್ನು ತಕ್ಕೋ ಎಂದು ನುಡಿದು ಫಲಮಂತ್ರಾ ಕ್ಷತೆ ಸಹಿತವಾಗಿ ಆ ಆಭರಣವನ್ನು ಆಕೆಯ ಉಡಿಯಲ್ಲಿ ಹಾಕಿದರು. ಆ ಸಾಧ್ವಿಯು ಚಕಿತಳಾದಳು. ತಾನು ಪುತ್ರಯಾಚನೆಯನ್ನು ಮಾಡದಿ ದ್ದರೂ ಈ ಮಹಾತ್ಮರು ಹೀಗೆ ನನಗೆ ಆಶೀರ್ವದಿಸಿದರಲ್ಲ? ಎಂದು ಮನ ಸ್ಸಿನಲ್ಲಿಯೇ ಮಹಾತ್ಮರನ್ನು ಕೊಂಡಾಡಿದಳು. ಸ್ಟೇಶನ್ನ ಮಾಸ್ತರನಿಗೂ ಸಂತೋಷವಾಯಿತೆಂಬದನ್ನು ಬರೆಯುವ ಕಾರಣವಿಲ್ಲ. ಬಳಿಕ ಮಹಾ ರಾಜರು ಪರಿವಾರದೊಡನೆ ಗೋಂದಾವಲಿಗೆ ತೆರಳಿದರು.

ಇತ್ತ ಸ್ಟೇಶನ್ನ ಮಾಸ್ತರನ ಧರ್ಮಪತ್ನಿಯು ಮಹಾರಾಜರ ವಚನ ದಲ್ಲಿ ವಿಶ್ವಾಸವನ್ನು ತಾಳಿ ಸಂತೋಷದಿಂದಿರುತ್ತಿರಲು, ಕೆಲದಿನಗಳಲ್ಲಿಯೇ ಗರ್ಭವತಿಯಾದಳು. ಆಗ ಅವರಿಗಾದ ಸಂತೋಷವನ್ನು ಬರೆಯಲಸ ದಳವು. ನವಮಾಸ ತುಂಬಿದ ಬಳಿಕ ಪುತ್ರರತ್ನವನ್ನೇ ಆಕೆಯು ಹೆತ್ತಳು. ಪ್ರಿಯವಾಚಕರೇ, ಆಗ ಆ ದಂಪತಿಗಳಿಗೆ ಎಷ್ಟು ಸಂತೋಷವಾಗಿರಬ ಹುದು? ಮಹಾರಾಜರನ್ನು ಎಷ್ಟು ಒಗೆದಾಗಿ ಕೊಂಡಾಡಿರಬಹುದು? ಸದ್ಭಕ್ತಿಯ ಫಲವನ್ನು ಅವರು ಇಂದು ಹೊಂದಿ ಮಹಾರಾಜರಲ್ಲಿ ಅತುಲ ನಿಷ್ಠೆಯನ್ನು ತಾಳಿದರು. ಬಳಿಕ ಅವರು ಪುತ್ರನೊಡನೆ ಗೋಂದಾವಲಿಗೆ ಮಹಾರಾಜರ ದರ್ಶನಕ್ಕೆ ಹೋಗಿ ತಮ್ಮ ಪ್ರೇಮವನ್ನು ವ್ಯಕ್ತಗೊಳಿಸಿ

ದರು. ಮಹಾರಾಜರು ಅವರನ್ನು ತಾರಕ ಮಂತ್ರೋಪದೇಶದಿಂದ ಪುನೀತರನ್ನಾಗ ಮಾಡಿದರು. ಇಂಥ ಸದ್ಭಕ್ತರೇ ಧನ್ಯರು.

---

## ೧೭ನೆಯ ಅಧ್ಯಾಯ:—ಸಣ್ಣ ರಾಮಮಂದಿರ ಸ್ಥಾಪನೆ.

ಶಾ. ಶಕೆ ೧೮೨೪—(೧೯೦೨)ಇಸ್ವಿ.



ಶ್ರೀಮಹಾರಾಜರವರು ಉಪಾಸನಾವೃದ್ಧ್ಯರ್ಥವಾಗಿ ಈ ಮೊದಲೇ ಒಂದು ರಾಮಮಂದಿರವನ್ನು ಕಟ್ಟಿಸಿ ಅದರಲ್ಲಿ ಶ್ರೀರಾಮನ ಪ್ರತಿಷ್ಠೆಯನ್ನು ಮಾಡಿದ್ದರಷ್ಟೇ; ಆದರೆ ಒಂದೇ ಗುಡಿಯಲ್ಲಿ ಜನರ ಗದ್ದಲವಾಗುವದೆಂದು ಮತ್ತೊಂದು ಮಂದಿರವನ್ನು ಕಟ್ಟಲಿಚ್ಛಿಸಿದರು. ದೊಡ್ಡವರ ಇಚ್ಛೆಗೆ ಬಂದ ಬಳಿಕ ಕಾರ್ಯವಾಗುವದಕ್ಕೆ ತಡವೇನು? ಕೂಡಲೆ ಮಂದಿರದ ಕೆಲಸಕ್ಕೆ ಪ್ರಾರಂಭವಾಯಿತು. ಈ ಮಂದಿರಕ್ಕೇ ಸಣ್ಣ ರಾಮಮಂದಿರವೆಂದು ಕರೆಯುವರು. ಈ ಮಂದಿರವನ್ನು ಕಟ್ಟುವ ಕೆಲಸ ನಡೆದಾಗ ಮಹಾರಾಜರು ಸ್ವಂತ ದೇಹದಂಡನ ಮಾಡಿದರು. ಭಗವತ್ಸೇವೆಯಲ್ಲಿ ಹ್ಯಾಗೆ ನಿರಭಿಮಾನದಿಂದ ದುಡಿಯಬೇಕೆಂಬದನ್ನು ತೋರಿಸಿ ಕೊಟ್ಟರು. ಮಹಾರಾಜರು ದೇಹದಂಡನ ಮಾಡಹತ್ತಿದ್ದನ್ನು ನೋಡಿ ಶಿಷ್ಯರೆಲ್ಲರೂ ದುಡಿಯುತ್ತಿದ್ದರು. ಕೂಲೀ ಆಳಿನ ಖರ್ಚಿಲ್ಲದೆ ಗುಡಿಯು ಹಾ ಹಾ ಅನ್ನುವಷ್ಟರಲ್ಲಿ ಮುಗಿಯಿತು. ಆಗ ಮಹಾರಾಜರು ಶಿಷ್ಯರನ್ನು ಕುರಿತು ಭಗವತ್ಸೇವೆಯಲ್ಲ ಹೀಗೆ ದೇಹದಂಡನ ಮಾಡಬೇಕೆಂದು ಸದುಪದೇಶ ಮಾಡಿದರು. ಬಳಿಕ ಶ್ರೀರಾಮಪ್ರತಿಷ್ಠೆಯ ಕೆಲಸಕ್ಕಾರಂಭವಾಯಿತು. ಪ್ರತಿಷ್ಠೆಗಾಗಿ ಎರಡುಸಾವಿರ ಜನ ಬ್ರಾಹ್ಮಣರು ಸೇರಿದರು. ಪ್ರತಿಷ್ಠಾಪನೆಯ ಕೆಲಸವು ಮುಗಿದ ಬಳಿಕ ಬ್ರಾಹ್ಮಣಸಂತರ್ಪಣೆಗೆ ಆರಂಭವಾಯಿತು. ಕೂಡಿದ ಜನರ ಮಾನದಿಂದ ನೋಡಿದರೆ ಮಾಡಿದ ಅಡಿಗೆಯು ತೀರ ಸ್ವಲ್ಪವಾಗಿತ್ತು. ಆ ದಿನ ಸಮಾರಾಧನೆಗೆ

ಉಂಡೆಗಳನ್ನು ಮಾಡಿಸಿದ್ದರು. ಆ ಉಂಡೆಗಳು ಕೂಡಿದ ಅರ್ಧ ಜನರಿಗೆ ಸಹ ಸಾಕಾಗಲಿಕ್ಕಿಲ್ಲೆಂದು ಜನರು ಅನುಮಾನ ಮಾಡಲಾರಂಭಿಸಿದರು. ಬಡಿಸುವವರು ಗಾಬರಿಯಾದರು. ಆಗ ಮಹಾರಾಜರು ಬಡಿಸುವ ಜನರನ್ನು ಕುರಿತು ನುಡಿದರೇನಂದರೆ—"ನೀವು ಗಾಬರಿಯಾಗಬೇಡಿರಿ. ಶ್ರೀ ರಾಮನು ಸಮರ್ಥನಿರುವನು. ಊಟಕ್ಕೆ ಕುಳಿತವರಿಗೆ ಯಥೇಚ್ಛವಾಗಿ ಬಡಿಸಿರಿ."

ಈ ಮೇರೆಗೆ ಮಹಾರಾಜರು ಹೇಳಿದರೂ ಬಡಿಸುವ ಜನರಿಗೆ ಧೈರ್ಯಸಾಲಲೊಲ್ಲದು. ನಡುಊಟಕ್ಕೆ ಪದಾರ್ಥಗಳು ತೀರಿದರೆ ಮುಂದೇನು ಮಾಡಬೇಕೆಂದು ಅವರು ಚಿಂತಿಸುತ್ತ ಕೈಬಿಗಿಹಿಡಿದು ಬಡಿಸಲಾರಂಭಿಸಿದರು. ಅನ್ನಬಡಿಸುವದಾದ ಒಳಿಕ ಉಂಡಿಯನ್ನು ಬಡಿಸಲಾರಂಭಿಸಿದರು. ಬಡಿಸುವವರು ಕೈಸಡಿಲು ಬಿಟ್ಟು ಉಂಡಿಯನ್ನು ಬಡಿಸದ್ದರಿಂದ ಮಹಾರಾಜರು ತಾವೇ ಸ್ವತಃ ಉಂಡಿಯ ಬುಟ್ಟಿಯನ್ನು ತಕ್ಕೊಂಡು ಬಡಿಸಲಾರಂಭಿಸಿದರು. ಉಂಡಿಯನ್ನು ತುಂಬಿದ ಸಂದಕವು ಬರಿದಾಯಿತು. ಒಂದೆರಡು ಬುಟ್ಟಿ ಉಂಡಿಗಳು ಮಾತ್ರ ಉಳಿದವು. ಆಗಂತೂ ಬಡಿಸುವವರ ಕೈಕಾಲೇ ಹೋದವು. ಇನ್ನೂ ಅರ್ಧ ಊಟವು ಕೂಡಾ ಆಗಿರುವದಿಲ್ಲ. ಉಂಡಿಗಳು ತೀರಿ ಹೋದವು ಏನು ಮಾಡಬೇಕೆಂದು ಉಂಡೀಬಡಿಸುವ ಜನರೆಲ್ಲರೂ ಸುಮ್ಮನೆ ನಿಂತುಬಿಟ್ಟರು. ಆಗ ಮಹಾರಾಜರು ಉಂಡಿಯ ಬುಟ್ಟಿಯನ್ನು ತುಂಬಿಕೊಂಡು ಬರಬೇಕೆಂದು ತಾವೇ ಕೂಗಿದರು. ಬಡಿಸುವವರು ನಿರ್ವಾಹವಿಲ್ಲದೆ ಬುಟ್ಟಿಯನ್ನು ತುಂಬಿದರು. ಎರಡು ಬುಟ್ಟಿಗಳನ್ನು ತುಂಬಲು ಆ ಸಂದುಕದಲ್ಲಿ ಮತ್ತೆರಡು ಬುಟ್ಟಿ ಉಂಡಿಗಳು ಕಾಣಿಸಿದವು. ಬಡಿಸುವವರಿಗೆ ಧೈರ್ಯಬಂದಿತು. ಒಬ್ಬನು ನಿಂತು ಬುಟ್ಟಿಗಳನ್ನು ತುಂಬಿಕೊಡಲಾರಂಭಿಸಿದನು. ಎಷ್ಟು ಬುಟ್ಟಿಗಳನ್ನು ತುಂಬಿಕೊಟ್ಟರೂ ಮೊದಲು ಉಳಿದಷ್ಟು ಉಂಡಿಗಳು ಸಿಲ್ಕು ಉಳಿಯಹತ್ತಿದವು. ಮಹಾರಾಜರು ಯಥೇಷ್ಟವಾಗಿ ಬಡಿಸಿ

ದರು. ಎರಡು ಸಾವಿರ ಜನರ ಊಟವಾಯಿತು. ಬಳಿಕ ಬಡಿಸಿದವರೂ ಆಳು ಹೋಳುಗಳೂ ಕಾಟಕಜನರೂ ಉಂಡರು. ಸಂಜೆಯವರೆಗೆ ಉಂಡಿಯನ್ನು ಖರ್ಚು ಮಾಡಿದರೂ ಸಂದುಕದಲ್ಲಿ ಎರಡು ಬುಟ್ಟಿ ಉಂಡಿಗಳು ಹಾಗೇ ಕಾಣಿಸುತ್ತಿದ್ದವು. ಜನರಿಗೆ ಆಶ್ಚರ್ಯವಾಯಿತು. ಮಹಾರಾಜರಲ್ಲಿ ಪ್ರತ್ಯಕ್ಷ ಅನ್ನಪೂರ್ಣೆಯು ಇರುವಳೆಂದು ಜನರು ಮಾತನಾಡಿದರು.

ಸಜ್ಜನರ ಶಕ್ತಿಯು ನೆಲೆಯು ಸದ್ಭಕ್ತರ ಹೊರತು ಅನ್ಯರಿಗೆ ತಿಳಿಯುವದಿಲ್ಲ. ತಂದೆಯು ವಿಶ್ವಾಸಕ್ಕೆ ಪಾತ್ರನಾದ ಪುತ್ರನಿಗೇ ತಂದೆಯ ಗುಪ್ತಧನವು ಎಷ್ಟಿದೆಯೆಂಬದು ಗೊತ್ತಾಗುವಂತೆ ಸಚ್ಛಿಷ್ಯನೊಬ್ಬನಿಗೇ ಗುರುವಿನ ಐಶ್ವರ ತೇಜಸ್ಸು ಗೊತ್ತಾಗುವದು. ಮಾಯಾರಹಿತರಾದ ಶಿಷ್ಯರೇ ಸದ್ಗುರುವನ್ನು ಯಥಾರ್ಥವಾಗಿ ತಿಳಿಯುವರಲ್ಲದೆ ಅನ್ಯರು ತಿಳಿಯಲಾರರು. ಅದರಂತೆ ಮಹಾರಾಜರ ಇತರ ಭಕ್ತರಿಗೆ ಅವರ ಐಶ್ವರ ತೇಜಸ್ಸು ತಿಳಿಯದೆ ಇದ್ದದ್ದು ಅಸ್ವಾಭಾವಿಕವಲ್ಲ. ಸಜ್ಜನರ ಚಮತ್ಕಾರಗಳು ದೃಷ್ಟಿಗೆ ಬಿದ್ದಾಗ ಅವರು ಮಹಿಮಾಶಾಲಿಗಳೆಂದು ಅನ್ನುವೆವು. ಕೆಲದಿನಗಳ ಮೇಲೆ ಅದರ ವಿಸ್ಮೃತಿಯಾಗಿ ಹೋಗುವದು. ವಿಸ್ಮೃತಿಯಾಗವಿದ್ದರೂ ಇಂಥ ಚಮತ್ಕಾರಗಳಲ್ಲೇನು ಮಹತ್ವವಿದೆ? ಆ ಕಾಲಕ್ಕೆ ನಮಗೆ ಹಾಗೆ ಭ್ರಾಂತಿಯಾಗಿರಬೇಕು ಎಂಬ ಕುಕಲ್ಪನೆಯು ನಮ್ಮನ್ನು ಮತ್ತೆ ನಾಸ್ತಿಕ ಪಥದಲ್ಲಿ ದೂಡುವದು. ಇದಕ್ಕೇ ಅಜ್ಞಾನವೆನ್ನಬೇಕು, ಇದಕ್ಕೇ ಭ್ರಾಂತಿಯೆನ್ನಬೇಕು. ನಮ್ಮ ಸದ್ಗುರುವು ಪ್ರತ್ಯಕ್ಷ ಪರಮೇಶ್ವರನೇ ಇರುವನೆಂಬ ದೃಢತರ ಭಾವವು ನಮ್ಮಲ್ಲುತ್ಪನ್ನವಾದರೆ ನಮ್ಮ ಉದ್ಧಾರವು ಆ ಕೂಡಲೆ ಆಗುವದು. ಹಾಗೆ ದೃಢತರವಾದ ನಿಶ್ಚಯವು ನಮ್ಮಲ್ಲಿ ಹುಟ್ಟದ್ದರಿಂದಲೇ ಅನೇಕ ಸಾಧುಗಳ ಸ್ಥಾನವನ್ನು ಅಂಡಲೆಯುತ್ತ ಎಲ್ಲಿಯೂ ವಿಶ್ವಾಸವನ್ನಿಡದೆ ಬರಿಗೈಯಾಗುವೆವು. ಇರಲಿ,

ಈ ರಾಮನವಮಿಯ ಕಟ್ಟಿನ ಕೆಲದಿನಗಳಲ್ಲಿಯೇ ಮಹಾರಾಜರು

ಮತ್ತೊಂದು ಸಮಾರಾಧನೆಯನ್ನು ಮಾಡಿಸಿದರು. ಉಗ್ರಾಣದ ವ್ಯವಸ್ಥಾಪಕನ ದುರ್ಲಕ್ಷ್ಯದಿಂದ ತುಪ್ಪದ ಸಿಲ್ಕು ತೀರಿತ್ತು. ಸಮಾರಾಧನೆಯ ದಿವಸಾದರೂ ಆತನಿಗೆ ಎಚ್ಚರ ಬರಲಿಲ್ಲ. ಮಧ್ಯಾಹ್ನದಲ್ಲಿ ಎಲೆ ಹಾಕುವ ಸಮಯಕ್ಕೆ ಮಹಾರಾಜರು ತುಪ್ಪ ಬಡಿಸುವವರನ್ನು ಕರೆದು ಎಲ್ಲರಿಗೂ ಒಂದೊಂದು ಚಮಚೆಯಂತೆ ತುಪ್ಪ ಬಡಿಸಬೇಕೆಂದು ಆಜ್ಞಾಪಿಸಿದರು. ಆಗ ಉಗ್ರಾಣದವನು ತುಪ್ಪದ ಸಿಲ್ಕನ್ನು ನೋಡಿ ಗಾಬರಿಯಾದನು. ಈಗಿದ್ದ ತುಪ್ಪವು ನೂರಾರು ಎಲೆಗಳಿಗೆ ಕೂಡ ಬಡಿಸುವಷ್ಟಿಲ್ಲೆಂದು ಅವನು ಸಣ್ಣ ಮೋರೆ ಮಾಡಿಕೊಂಡು ಮಹಾರಾಜರೆದುರಿಗೆ ನಿಂತುಕೊಂಡನು. ಮೊದಲೇ ತುಪ್ಪವನ್ನು ನೋಡಿ ಯಾಕೆ ತರಿಸಿ ಇಡಲಿಲ್ಲವೆಂದು ಮಹಾರಾಜರು ಅವನನ್ನು ಬೆದರಿಸಿ ಕೇಳಿದರು. ಮಹಾರಾಜರು ಏನು ಮಾಡುವರೋ ಎಂದು ಅವನು ಸುಮ್ಮನೆ ನಿಂತುಕೊಂಡನು. ಆಗ ಮಹಾರಾಜರು ಎಲ್ಲ ಸೇವಕರನ್ನು ಕರೆಯಿಸಿ ಇಂತು ನುಡಿದರು— ಭಗವತ್ಸೇವೆಗೆ ಬಂದವರು ನಿರಾಲಸ್ಯದಿಂದ ದುಡಿಯಬೇಕು. ಸರ್ವದಾ ಭಗವತ್ಸೇವೆಯಲ್ಲಿಯೇ ಕಾಲ ಕಳೆಯಬೇಕು. ಆಲಸ್ಯವನ್ನಾಗಲಿ ದುರ್ವರ್ತನವನ್ನಾಗಲಿ ತಾಳಬಾರದು. ಯಾವನು ಯಾವ ಕೆಲಸವನ್ನು ವಹಿಸಿಕೊಂಡಿರುವನೋ ಅವನು ಅದೇ ಕೆಲಸದಲ್ಲಿಯೇ ತಲ್ಲೀನನಾಗಬೇಕು. ಆ ಕೆಲಸವನ್ನು ಅವನು ಕಸರಿಲ್ಲದಂತೆ ಮಾಡಿದರೆ ಅವನ ಉದ್ಧಾರಕ್ಕೆ ತಡವಾಗದು. ಕೈಕೊಂಡ ಕೆಲಸದಲ್ಲಿ ತಪ್ಪು ಮಾಡಿದರೆ ಅವನು ಗುರುದ್ರೋಹಿಯಾಗುವನು. ಗುರುಸೇವಕರು ಪ್ರತ್ಯಕ್ಷ ದೇವರು ಬಂದು ಕರೆದರೂ ತಮ್ಮ ಕೆಲಸವನ್ನು ಬಿಟ್ಟು ಹೋಗಬಾರದು. ನಿಷ್ಠಾವಂತನಾದ ಗುರುಸೇವಕನ ಚರಣಗಳನ್ನು ಸಕಲ ತೀರ್ಥಗಳೂ ಆಶ್ರಯಿಸುವವು; ಆದ್ದರಿಂದ ಆತನಿಗೆ ತೀರ್ಥ ಯಾತ್ರೆಗಳನ್ನು ಮಾಡುವ ಪ್ರಯೋಜನವೇನು? ಗ್ರಂಥಾದಿಗಳನ್ನು ಓದುವ ಪ್ರಯೋಜನವೇನು? ಈಗಿನ ಜನರಿಗೆ ಭಗವತ್ಸೇವೆಯ ಮಹತ್ವವು ಗೊತ್ತಿಲ್ಲ. ದೇಹದಂಡನದ ರೀತಿಯು ತಿಳಿಯುವದಿಲ್ಲ.

ಹುಳಕ್ಕಿಂತಲೂ ಹುಳವಾಗಿ ನಡೆದರೆ ಅಂದರೆ ದೇಹಾಭಿಮಾನ ತೊರೆದು. ನಡೆದರೆ ಭಗವತ್ಸೇವೆಯು ಸಾಧಿಸುವದು. ಈ ಶ್ರೀಧರಭಟ್ಟನು ಉಗ್ರಾಣದ ಕೆಲಸವನ್ನು ಸೆಟ್ಟಗೆ ಮಾಡಲಿಲ್ಲ. ಈ ದಿನ ಸಮಾರಾಧನವಿದ್ದರೂ ಯಾವ ಪದಾರ್ಥವಿದೆ ಯಾವದು ಇಲ್ಲೆಂಬದು ಈತನಿಗೆ ಗೊತ್ತಿರಬಾರದೆಂದರೆ ಇವನು ಸೇವೆಯನ್ನು ಎಷ್ಟು ದಕ್ಷತೆಯಿಂದ ಮಾಡುತ್ತಾನೆಂಬದನ್ನು ನೀವೇ ನೋಡಿರಿ. ಹೀಗೆ ಸೇವೆ ಮಾಡಿದರೆ ನಿಮ್ಮ ಉದ್ಧಾರವು ಎಷ್ಟು ಜನ್ಮಕ್ಕಾಗಬೇಕು? ಇದರಂತೆ ಯಾರೂ ಮಾಡಬಾರದು.

ಶ್ರೀಧರಭಟ್ಟನು ಮಹಾರಾಜರ ಚರಣಗಳ ಮೇಲೆ ಬಿದ್ದು, ಕ್ಷಮೆ ಮಾಡಬೇಕೆಂದು ಹೇಳಿಕೊಂಡನು. ಸಜ್ಜನರಲ್ಲಿ ಕ್ಷಮೆಗೇನು ಕೊರತೆ? ಇನ್ನೊಮ್ಮೆ ಹೀಗೆ ಮಾಡಬೇಡವೆಂದು ಆತನ ಕೆಲಸವನ್ನು ಆತನಿಗೆ ಕೊಟ್ಟರು. ಅಷ್ಟರಲ್ಲಿ ಯಾರೋ ಇಬ್ಬರು ಎರಡು ತುಪ್ಪದ ಡಬ್ಬಿಗಳನ್ನು ಹೊತ್ತುಕೊಂಡು ಬಂದು ಬಾಗಿಲಲ್ಲಿ ನಿಂತು ಕೂಗಿದರು. ಒಬ್ಬ ಶಿಷ್ಯನು ಹೋಗಿ ವಿಚಾರಿಸಿ ಅವರು ತಂದಿದ್ದ ತುಪ್ಪದ ಡಬ್ಬಿಗಳನ್ನು ಮಹಾರಾಜರ ಮುಂದಿಟ್ಟನು. ಆಯುತಕಾಲಕ್ಕೆ ಒದಗಿದ ತುಪ್ಪವನ್ನು ನೋಡಿ ಮಹಾರಾಜರು ಆನಂದಪಟ್ಟವರಂತೆ ನಟಿಸಿ ಶ್ರೀ ರಾಮನ ಕೃಪೆಯಿಂದ ತುಪ್ಪವು ಒದಗಿರುವದು. ಬೇಕಾದಷ್ಟು ಬಡಿಸಿರಿ ಎಂದು ನುಡಿದರು. ಆ ದಿನ ಊಟಕ್ಕೆ ಕುಳಿತವರು ಸಾಕಾಗುವಷ್ಟು ತುಪ್ಪವನ್ನು ಉಂಡರು. ದೊಡ್ಡವರ ಮಹಿಮೆಯನ್ನು ಎಷ್ಟು ಬಗೆಯಿಂದ ಕೊಂಡಾಡಿದರೂ ಅಲ್ಪವೇ ಇರುವದು.

---

## ೧೮ನೆಯ ಅಧ್ಯಾಯ:—ಗುಪ್ತಪೋಲೀಸ.

ಸನ್ ೧೯೦೮ ಇಸ್ವಿ.



ಲೋಕಮಾನ್ಯ ಟಿಳಕರವರಿಗೆ ಆರುವರುಷದ ಕರಿನೀರಿನ ಶಿಕ್ಷೆಯಾದ ಕಾಲದಲ್ಲಿ ದೇಶದಲ್ಲೆಲ್ಲ ರಾಜಕೀಯ ಚಳವಳಿಯು ಹರಡಿಕೊಂಡಿ

ತ್ತು. ಪ್ರಜೆಗಳು ಎಲ್ಲಿ ರಾಜದ್ರೋಹಿಗಳಾಗುವರೋ ಎಂದು ಸರಕಾರವು ಸಾಶಂಕವಾಗಿತ್ತು. ಆದ್ದರಿಂದ ಸರಕಾರವು ರಾಜದ್ರೋಹವು ಎಲ್ಲಿರುವದೆಂಬದನ್ನು ಶೋಧಿಸುವದಕ್ಕೆ ಬಹು ದಕ್ಷತೆಯನ್ನು ವಹಿಸಿತ್ತು. ರಾಜದ್ರೋಹವು ತೀರ್ಥ-ಕ್ಷೇತ್ರಗಳಲ್ಲಿದೆಯೇ, ರಾಜಕೀಯ ಪುಢಾರಿಗಳಲ್ಲಿದೆಯೇ, ಮಠ ಮೊದಲಾದವುಗಳಲ್ಲಿದೆಯೇ ಅಥವಾ ಸಾಧು ಸಜ್ಜನರಲ್ಲಿದೆಯೇ ಎಂಬದನ್ನು ಶೋಧಿಸುವದಕ್ಕೆ ನಿಷ್ಣಾತರಾದ ಗುಪ್ತಪೋಲೀಸರನ್ನು ನಿಯಮಿಸಿತ್ತು. ಮಹಾರಾಜರು ಸಮರ್ಥರಾಮದಾಸರ ಎರಡನೇ ಅವತಾರವೆಂಬ ಸುದ್ದಿಯು ಅಧಿಕಾರಸ್ಥರಿಗೆ ಒಡಿದ ಒಳಿಕಂತೂ ಸರಕಾರದ ಲಕ್ಷ್ಯವು ಮಹಾರಾಜರ ಕಡೆಗೇ ಹೊರಳಿತು. ರಾಮದಾಸರು ಮುಸಲ್ಮಾನರಾಜ್ಯದಲ್ಲಿ ಕ್ರಾಂತಿಯನ್ನುಂಟು ಮಾಡಿದಂತೆ ಇವರೂ ನಮ್ಮ ರಾಜ್ಯದಲ್ಲಿ ಕ್ರಾಂತಿಯನ್ನುಂಟು ಮಾಡಬಹುದೆಂದು ತಿಳಿದು ಅವರ ಬಳಿಗೆ ಗುಪ್ತಪೋಲೀಸರನ್ನು ಕಳಿಸತೊಡಗಿತು. ಮಹಾರಾಜರು ಕೇವಲ ಭಕ್ತರನ್ನುದ್ಧರಿಸಲು ಅವತರಿಸಿರುವರೆಂಬದು ಆ ಸರಕಾರಕ್ಕೆ ಹೇಗೆ ತಿಳಿಯಬೇಕು? ಎಷ್ಟೋ ಜನಗುಪ್ತ ಪೋಲೀಸರು ಅವರ ಬಳಿಗೆ ಒಂದು ಹೋದರು. ಒಮ್ಮೆ ವಾಮನರಾಯನೆಂಬ ಅತ್ಯಂತ ಚಾಣಾಕ್ಷ ಗುಪ್ತಪೋಲೀಸನು ಅವರ ಬಳಿಗೆ ಬಂದನು. ದಿನಾಲು ಸಾವಿರಾರು ಜನರು ದರ್ಶನಕ್ಕೆ ಬರುತ್ತಿದ್ದರು. ಅಂದಬಳಿಕ ವೇಷಾಂತರಿಸಿ ಬಂದ ಗುಪ್ತಪೋಲೀಸರ ಗುರ್ತು ಯಾರಿಗೆ ಹತ್ತಬೇಕು? ಆದರೆ ಮಹಾರಾಜರು ಸರ್ವಾಂತರ್ಯಾಮಿಗಳಾದ್ದರಿಂದ ಅವರಿಗೆ ತಿಳಿಯದ್ದು ಯಾವದಿರುವದು? ಅವರು ವಾಮನರಾಯನು ಗುಪ್ತಪೋಲೀಸನೆಂಬದನ್ನು ತಿಳಿದರು. ವಾಮನರಾಯನು ಒಳ್ಳೇ ಭಕ್ತನಂತೆ ನಟಿಸುತ್ತ ಮಹಾರಾಜರ ಬಳಿಯಲ್ಲಿ ಸುಳಿದಾಡಲಾರಂಭಿಸಿದನು.

ಹೀಗಿರಲು ಒಂದು ದಿನ ಮಹಾರಾಜರು ಭಕ್ತರಿಗೆ ಸದುಪದೇಶ ಮಾಡುತ್ತ ಕುಳಿತಾಗ ನುಡಿದರೇನಂದರೆ—ಸಜ್ಜನರ ಬಳಿಯಲ್ಲಿ ಮನು

ಷ್ಯನು ಯಾವ ನಿಮಿತ್ತದಿಂದ ಬಂದು ಇದ್ದರೂ ಅವನು ಪವಿತ್ರನಾಗುವನು. ಜೇಷ್ಟೆಯಿಂದ ರಾಮನಾಮವನ್ನುಚ್ಚರಿಸಿದರೂ ಅದು ಅವನನ್ನು ಉದ್ಧರಿಸುವದು. ಬೆಂಕಿಯನ್ನು ಸಹಜವಾಗಿ ಉಡಿಯಲ್ಲಿ ಕಟ್ಟಿಕೊಂಡರೂ ಅದು ವಸ್ತ್ರವನ್ನು ಸುಡದೆ ಬಿಟ್ಟೀತೆ? ಅದು ಹ್ಯಾಗೆ ತನ್ನ ಕೆಲಸ ಮಾಡುವದೋ ಹಾಗೆ ಸತ್ಪುರುಷರ ಸಾನ್ನಿಧ್ಯವು ಮನುಷ್ಯನಲ್ಲಿ ಪವಿತ್ರತೆಯನ್ನುಂಟು ಮಾಡದೆ ಇರದು. ಇದಕ್ಕಾಗಿ ನಿಮಗೊಂದು ಕಥೆಯನ್ನು ಹೇಳುತ್ತೇನೆ ಕೇಳಿರಿ.

ಒಂದು ಊರಲ್ಲಿ ಒಬ್ಬ ಶ್ರೀಮಂತನಿದ್ದನು. ಅವನಿಗೆ ಬಹು ಚಲುವೆಯಾದ ಒಬ್ಬ ಮಗಳಿದ್ದಳು. ಆಕೆಯನ್ನು ಲಗ್ನವಾಗಬೇಕೆಂದು ಆ ಶ್ರೀಮಂತನ ಪುರೋಹಿತನಿಗೆ ಇಚ್ಛೆಯುತ್ಪನ್ನವಾಯಿತು. ಪುರೋಹಿತನು ತರುಣನಿದ್ದರೂ ಬಡವನಿದ್ದನು. ಶ್ರೀಮಂತ ಕನ್ನಿಕೆಯು ಬಡವನ ಕೊರಳಿಗೆ ಮಾಲೆಹಾಕುವದು ಹ್ಯಾಗೆ? ಆ ಬ್ರಾಹ್ಮಣನು ಒಮ್ಮೊಮ್ಮೆ ನಿರಾಶನಾಗುವನು. ಆದರೂ ಆಕೆಯ ಮೇಲಿನ ಮೋಹವು ದಿನದಿನಕ್ಕೆ ಬೆಳೆಯುತ್ತಲೇ ಹೋಯಿತು. ಹುಡಿಗೆಯು ದೊಡ್ಡವಳಾಗುತ್ತ ನಡೆದಂತೆ ಆಕೆಯಲ್ಲಿ ಆ ಬಡಬ್ರಾಹ್ಮಣನ ಅನುರಕ್ತಿಯು ಹೆಚ್ಚಾಗತೊಡಗಿತು. ವಿಷಯದ ಹಂಬಲವು ಅತ್ಯಂತ ನೀಚತರದ್ದಾಗಿರುವದು. ಆ ಹಂಬಲಕ್ಕೆ ಗುರಿಯಾದವನು ವಿವೇಕಶೂನ್ಯನಾಗುವನು. ಅವನಲ್ಲಿ ನಿರ್ಲಜ್ಜತನವು ನೆಲೆಗೊಳ್ಳುವದು. ಅದರಂತೆ ಆ ಬ್ರಾಹ್ಮಣನ ಅವಸ್ಥೆಯಾಯಿತು. ಅವನು ವಿಷಯದ ದಾಸನಾದನು. ಆ ಕನ್ನಿಕೆಯು ಹ್ಯಾಗಾದರೆ ತನ್ನನ್ನು ಮದುವೆಯಾಗುವಳು? ಎಂಬ ಯೋಚನೆಯೇ ಹಗಲಿರುಳೂ ಆತನ ಮನಸ್ಸಿನಲ್ಲಿ ಮನೆಮಾಡಿಕೊಂಡಿತು. ಒಂದು ದಿನ ಆಕೆಗೆ ತಾನೇ ಹೇಳಿಕೊಂಡು ನೋಡಬೇಕೆಂದು ಅವನ ಮನಸ್ಸಿನಲ್ಲಿ ವಿಚಾರ ಬಂದಿತು. ಹೀಗೆ ಹೇಳಿಕೊಂಡರೆ ಆ ಕನ್ಯೆಯು ಒಪ್ಪಬಹುದೇ? ಎಂಬ ವಿಚಾರವನ್ನು ಅವನು ಮಾಡಲಿಲ್ಲ. ದಿನಾಲು ದೇವರ ಪೂಜೆಗೆ ಹೋದಾಗ ಆಕೆಯನ್ನು ನೋಡಿ

ಮನಸ್ಸಿನಲ್ಲಿಯೇ ಚಡಪಡಿಸುತ್ತಿದ್ದನು. ಮತ್ತು ಆಕೆಯನ್ನು ಮಾತಾ ಡಿಸಲಿಕ್ಕೆ ಅನುಕೂಲ ಸಂಧಿಯನ್ನು ನಿರೀಕ್ಷಿಸುತ್ತಿದ್ದನು. ಆ ಹುಡುಗಿಯು ತನ್ನನ್ನು ಮಾಡಿಕೊಳ್ಳಲಿಕ್ಕೆ ಒಪ್ಪಿಕೊಂಡರೆ ತನ್ನ ಸಮಾನ ಧನ್ಯರೇ ಇಲ್ಲವೆಂದು ಅವನು ಮನಸ್ಸಿನಲ್ಲಿಯೇ ಮಂಡಿಗೆಯನ್ನು ರಚಿಸುತ್ತಿದ್ದನು. ಆತನ ಸುದೈವದಿಂದ ಒಮ್ಮೆ ಸಂಧಿಯು ದೊರೆಯಿತು. ಯಜಮಾನ ಯಜಮಾನತಿಯರು ದೂರದಲ್ಲಿದ್ದರು. ದಾಸದಾಸಿಯರಾರೂ ಇರಲಿಲ್ಲ. ಆ ಕನ್ನಿಕೆಯೊಂದೇ ನಡುಮನೆಯಲ್ಲಿ ಕುಳಿತುಕೊಂಡಿತ್ತು. ಪುರೋಹಿತನು ಈ ಸಂಧಿಯನ್ನು ಸಾಧಿಸಿ ಆ ಕನ್ನಿಕೆಯ ಬಳಿಗೆ ಹೋಗಿ—ನೀನು ನನ್ನನ್ನು ಮದುವೆಯಾಗುವೆಯಾ? ಒಂದು ವೇಳೆ ನೀನು ಹಾಗೆ ಮಾಡಿದರೆ ಜನ್ಮವಿರುವವರೆಗೆ ನಿನ್ನ ಸೇವೆಮಾಡಿಕೊಂಡಿರುವೆನು. ಎಂದು ನುಡಿದನು. ಕನ್ನಿಕೆಯು ಸುಶೀಲಳಿದ್ದಳು, ಆಕೆಯಲ್ಲಿ ವಿಚಾರವಿತ್ತು. ಮತ್ತೊಬ್ಬ ಸಿಟ್ಟಿನ ಕನ್ನಿಕೆಯಾಗಿದ್ದರೆ ತಾಯಿ-ತಂದೆಗಳ ಮುಂದೆ ಹೇಳಿ ಅವನನ್ನು ಹೊಡೆಸಿ ಮನೆಬಿಟ್ಟು ಹೊರಗೆ ಹಾಕಿಸುತ್ತಿದ್ದಳು. ಆದರೆ ಆ ಕನ್ನಿಕೆಯು ಅಂಥ ಮೂಢಳಿದ್ದಿಲ್ಲ. ಆಗ ಆಕೆಯು ವಿಚಾರಮಾಡಿ— ಬ್ರಾಹ್ಮಣನೇ, ನೀನು ಅರಣ್ಯದಲ್ಲಿ ಒಂದು ಗಿಡದ ಬುಡದಲ್ಲಿ ನಾಲ್ವತ್ತು ದಿನಗಳವರೆಗೆ ಕುಳಿತು ರಾಮಧ್ಯಾನ ಮಾಡಿದರೆ ನಾನು ನಿನ್ನ ಮದುವೆಯಾಗುವೆನು ಎಂದು ಉತ್ತರ ಕೊಟ್ಟಳು. ಬ್ರಾಹ್ಮಣನಿಗೆ ತುಂಬಾ ಸಂತೋಷವಾಯಿತು. ಇಂಥ ಸುಂದರಿಯು ತನಗೆ ಮಾಲೆಹಾಕುವಳೆಂಬ ಉಬ್ಬಿನಿಂದ ಅವನು ಆ ಕೂಡಲೆ ಮನೆಯಿಂದ ಹೊರಟು ಅಡವಿಯನ್ನು ಸೇರಿ ಶ್ರೀರಾಮಧ್ಯಾನದಲ್ಲಿ ಆಸಕ್ತನಾದನು. ಸ್ತ್ರೀಯು ದೊರಕುವಳೆಂಬ ಹರುಷದಿಂದ ಆಹಾರನಿದ್ರೆಗಳನ್ನು ತೊರೆದು ಅಖಂಡವಾಗಿ ರಾಮ ಜಪವನ್ನು ಸಾಗಿಸಿದನು. ಆ ಶ್ರೀಮಂತನ ಕನ್ನಿಕೆಯು ಆ ಬ್ರಾಹ್ಮಣನು ಏನು ಮಾಡುವನೆಂಬದನ್ನು ಆಳುಗಳ ಮುಖಾಂತರ ದಿನಾಲು ಸುದ್ದಿಯನ್ನು ತರಿಸುತ್ತಿದ್ದಳು. ನಾಲ್ವತ್ತು ದಿನಗಳು ಕ್ರಮಿಸಿಹೋದವು.

ಆದರೆ ಆ ಬ್ರಾಹ್ಮಣನು ಆ ಕನ್ನಿಕೆಯು ವಿವಾಹ ಮಾಡಿಕೊಳ್ಳುವದಕ್ಕೆ ಮನೆಗೆ ಬರಲಿಲ್ಲ. ಆಗ ಆ ಕನ್ನಿಕೆಯು ಬ್ರಾಹ್ಮಣನಿಗೆ ವಚನಕೊಟ್ಟಂತೆ ತಾನೇ ಆ ಬ್ರಾಹ್ಮಣನಿದ್ದಲ್ಲಿಗೆ ಹೋಗಿ—ವಿಳು ಬ್ರಾಹ್ಮಣನೇ, ನೀನು ನಾಲ್ವತ್ತು ದಿನಗಳವರೆಗೆ ಶ್ರೀರಾಮ ನಾಮದ ಜಪಮಾಡಿದ್ದರಿಂದ ನಾನು ವಚನಕೊಟ್ಟ ಮೇರೆಗೆ ನಿನ್ನನ್ನು ಮದುವೆಯಾಗಲು ಬಂದಿರುವೆನು ಎಂದು ನುಡಿದಳು. ಬ್ರಾಹ್ಮಣನು ಕಣ್ಣು ತೆರೆದು ನೋಡಿದನು. ಆದರೆ ಆ ಸುಂದರ ಕನ್ನಿಕೆಯ ಮುಖವನ್ನು ನೋಡಿ ಅವನಲ್ಲಿ ವಿಷಯಲಾಲಸೆಯುತ್ಪನ್ನವಾಗಲಿಲ್ಲ. ಅವನು ಆ ಕನ್ನಿಕೆಗೆ ನಮಸ್ಕರಿಸಿ—ತಾಯಿ, ನೀನೇ ನನಗೆ ಗುರುವಾದೆ! ಈಗ ನಾನು ಸ್ವಾನಂದಸಾಮ್ರಾಜ್ಯದಲ್ಲಿ ಲೋಲಾಡುತ್ತಿರುವೆನು. ನಾನು ಪೂರ್ಣ ತೃಪ್ತನೂ ನಿತ್ಯಮುಕ್ತನೂ ಆಗಿರುವೆನು. ನಾನು ಇನ್ನು ಸಂಪಾದಿಸತಕ್ಕ ವಸ್ತುವು ಜಗತ್ತಿನಲ್ಲಿ ಯಾವದೂ ಇರುವದಿಲ್ಲ ಎಂದು ನುಡಿದನು.

ಶ್ರೋತೃಗಳೇ, ನೋಡಿದಿರಾ, ಆ ಬ್ರಾಹ್ಮಣನ ಸ್ಥಿತಿಯನ್ನು! ಕೇವಲ ಸ್ತ್ರೀಕಾಮುಕನಾಗಿ ರಾಮನನ್ನು ಭಜಿಸಿದರೂ ಆತನು ಸ್ವಾನಂದ ಸಾಮ್ರಾಜ್ಯದಲ್ಲಿ ಕಾಲಿಟ್ಟನು. ಶ್ರೀರಾಮನಾಮವು ಅವನ ವಿಷಯೇಚ್ಛೆಯನ್ನು ಕಡಿದು ಚಲ್ಲಿತು. ಅದರಂತೆ ಸಜ್ಜನರ ಸನ್ನಿಧಿಗೆ ಕಾಮನಾಪರತ್ವದಿಂದಾಗಲಿ, ಸರಕಾರೀ ಕೆಲಸದಿಂದಾಗಲಿ ಯಾವ ನಿಮಿತ್ಯದಿಂದಾಗಲಿ ಬಂದರೂ ಅವರು ಉದ್ಧೃತರಾಗುವರು. ಅವರಲ್ಲಿದ್ದ ಪಾಪಬುದ್ಧಿಯು ಕ್ರಮೇಣ ಲಯವಾಗಿ ಜನ್ಮಾಂತರದಲ್ಲಾದರೂ ಅವರು ಮುಕ್ತರಾಗುವರು.

ಈ ಮೇರೆಗೆ ಮಹಾರಾಜರು ಉಪದೇಶ ಮಾಡಲು ಈ ಸಂಗತಿಯು ವಾಮನರಾಯನ ಮನಸ್ಸಿಗೆ ಬಹಳವಾಗಿ ಹತ್ತಿತು. ಮಹಾರಾಜರು ತನ್ನನ್ನೇ ಉದ್ದೇಶಿಸಿ ಹೀಗೆ ಬೋಧ ಮಾಡಿದರೆಂಬ ಕಲ್ಪನೆಯು ಅವನಲ್ಲಾಯಿತು. ವಸ್ತುತಃ ಮಹಾರಾಜರು ಅವನ ಸಲುವಾಗಿಯೇ ಹೀಗೆ

ಬೋಧ ಮಾಡಿದ್ದರು. ಮುಂದೆ ಕೆಲದಿನಗಳ ಮೇಲೆ ಮಹಾರಾಜರು ಒಂದು ಅಂಗಡಿಯ ಕಟ್ಟೆಯ ಮೇಲೆ ಕುಳಿತು ಹರಟೆ ಹೊಡೆಯುತ್ತಿದ್ದರು. ಆ ಕಾಲಕ್ಕೆ ವಾಮನರಾಯನು ತನ್ನ ಬಿಡಾರದಲ್ಲಿ ಮಲಗಿಕೊಂಡಿದ್ದನು; ತಾಸೆರಡು ತಾಸುಗಳ ಮೇಲೆ ಅವನು ಅಲ್ಲಿಗೆ ಬಂದನು. ಆಗ ಮಹಾರಾಜರು ಅವನನ್ನು ಕುರಿತು —ಏನು ಗುಪ್ತಪೋಲೀಸರೇ, ಇಷ್ಟೊತ್ತಿನ ವರೆಗೆ ಎಲ್ಲಿಗೆ ಹೋಗಿದ್ದಿರಿ? ನಾವು ಈಗ ೨ ತಾಸುಗಳಿಂದ ಭಯಂಕರ ರಾಜಕೀಯ ವಿಷಯವನ್ನೇ ಮಾತಾಡುತ್ತ ಕುಳಿತುಕೊಂಡಿದ್ದೆವು. ನೀವೆಲ್ಲಿಗೆ ಹೋಗಿದ್ದಿರಿ? ನೀವು ನಿಮ್ಮ ಕರ್ತವ್ಯದಲ್ಲಿ ತಪ್ಪಿದ್ದರಿಂದ ನಾನೇ ನಿಮಗೆ ಈ ದಿನ ಎಚ್ಚರ ಕೊಡಬೇಕಾಯಿತು. ಯಾರಾದರೂ ಕೈಕೊಂಡ ಕಾರ್ಯವನ್ನು ಚನ್ನಾಗಿ ಮಾಡಬೇಕು. ಆದರೆ ಅದರಲ್ಲಿ ತಮ್ಮ ಸುಳ್ಳ ಕಲ್ಪನೆಯನ್ನು ಬೆರಸಿ ದೇಶದ ಅಕಲ್ಯಾಣ ಮಾತ್ರ ಮಾಡಬಾರದು ಎಂದು ನುಡಿದರು. ವಾಮನರಾಯನು ತೀರಾ ನಾಚಿಕೊಂಡನು. ಅವನು ಮಹಾರಾಜರಿಗೆ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡನು. ಅದಕ್ಕೆ ಮಹಾರಾಜರು—ಏನಯ್ಯಾ ಇದರಲ್ಲಿ ನಿನ್ನದೇನು ತಪ್ಪು? ಸರಕಾರದ ನೌಕರಿಯನ್ನು ಸ್ವೀಕರಿಸಿದ ಬಳಿಕ ನೀನು ಆ ಕೆಲಸ ಮಾಡಲೇ ಬೇಕು. ಆದರೆ ಆ ಕೆಲಸವನ್ನು ಮಾಡುವಾಗ ನಿಜವಾದ ಸಂಗತಿಯನ್ನು ಮಾತ್ರ ಸರಕಾರಕ್ಕೆ ತಿಳಿಸುತ್ತ ಹೋಗು ಎಂದು ನುಡಿದು ಆತನಿಗೆ ಅನೇಕಬಗೆಯ ಸದುಪದೇಶವನ್ನು ಮಾಡಿದರು. ವಾಮನರಾಯನು ಸಂತುಷ್ಟನಾಗಿ ಮಹಾರಾಜರಿಂದ ಅನುಗ್ರಹ ಪಡೆದು ಅಲ್ಲಿಂದ ಹೊರಟು ಹೋದನು.

---

## ೧೯ನೆಯ ಅಧ್ಯಾಯ.—ಕಳ್ಳರನ್ನು ಹಾದಿಗೆ ಹಚ್ಚಿದ್ದು.



ಸಜ್ಜನರಲ್ಲಿ ವಿಲಕ್ಷಣ ಶಕ್ತಿಯಿರುತ್ತದೆ. ಅವರ ಮನಸ್ಸಿಗೆ ಬಂದರೆ ಪ್ರತಿ ಸೃಷ್ಟಿಯನ್ನೇ ಮಾಡುವರು. ಮನುಷ್ಯನ ಮೂಲಸ್ವಭಾವವು ಏನು

ಮಾಡಿದರೂ ಹೋಗುವದಿಲ್ಲವಷ್ಟೇ: ಆದರೆ ಸಜ್ಜನರ ಕೃಪೆಯಾದರೆ ಆ ಸ್ವಭಾವವು ಹೇಳ ಹೆಸರಿಲ್ಲದೆ ಹೋಗುವದು. ಸಜ್ಜನರ ಸಹವಾಸದಿಂದ ಭವರೋಗವೂ ಸಂಚಿತಕರ್ಮವೂ ನಾಮಶೇಷವಾಗುತ್ತಿರುವಾಗ ಸ್ವಭಾವದಲ್ಲಿ ಕ್ರಾಂತಿಯಾಗುವದು ಅಸ್ವಾಭಾವಿಕವಲ್ಲ. ಇದಕ್ಕಾಗಿ ಮಹಾರಾಜರ ಕಾಲದಲ್ಲಿ ಒದಗಿದ ಒಂದು ಸಂಗತಿಯನ್ನು ಇಲ್ಲಿ ವಿವರಿಸುತ್ತೇವೆ.

ಮಹಾರಾಜರು ಪಂಢರಪುರದ ಯಾತ್ರೆಗೆ ಹೊರಟರು. ಸಂಗಡ ೩೦|೪೦ ಜನರಿದ್ದರು. ವಿಪುಲವಾದ ದ್ರವ್ಯವೂ ಹತ್ತರಿತ್ತು. ಪಂಢರಪುರವು ಕೆಲದಾರೀ ದೂರ ಇರುವಾಗ ಒಂದು ಸ್ಥಳದಲ್ಲಿ ರಾತ್ರೀವಸ್ತಿಗೆ ನಿಂತರು. ಅದು ಗಹನಾರಣ್ಯ. ಆ ಪ್ರಾಂತದಲ್ಲ ವಿಠೂರಾಮೋಸಿ ಎಂಬೊಬ್ಬ ನಿಷ್ಣಾತ ಕಳ್ಳನಿದ್ದನು. ಆತನು ಮಹಾಬಲಿಷ್ಠನಿದ್ದದ್ದಲ್ಲದೆ ಅವನ ಕೈಕೆಳಗೆ ಸಾವಿರಾರು ಜನರು ಕಳ್ಳರಿದ್ದರು. ಆದರಲ್ಲಿಯೂ ಅವನು ಕಳ್ಳತನದಲ್ಲಿ ಅತ್ಯಂತ ಪ್ರಸಿದ್ಧನಾಗಿದ್ದನು. ಅವನ ಹೆಸರನ್ನು ಕೇಳಿದರೆ ಜನರು ಅಂಜಿ ಸಾಯುತ್ತಿದ್ದರು. ಅಂಥ ರಾಜಗಳ್ಳನಿರುವ ಸ್ಥಳದಲ್ಲಿಯೇ ಮಹಾರಾಜರು ವಸತಿಯನ್ನು ಮಾಡಿದರು. ಸಂಗಡ ಇದ್ದ ಜನರು ಇದು ಕಳ್ಳರ ಸ್ಥಳವಂತೆ ಇಲ್ಲಿದ್ದರೆ ನಮಗೆ ಹೊಡತ ತಪ್ಪದು ಎಂದು ಬಹಳವಾಗಿ ಹೇಳಿದರು. ಆದರೂ ಮಹಾರಾಜರು ಕೇಳಲಿಲ್ಲ ಸರಿ ರಾತ್ರಿಯ ಸುಮಾರಿಗೆ ವಿಠೂರಾಮೋಸಿಯು ತನ್ನ ನೂರಾರು ಜನರೊಡನೆ ಮಹಾರಾಜರಿಗೆ ಮುತ್ತಿಗೆಯನ್ನು ಹಾಕಿದನು. ಪರಸಿಯಜನರು ಆಕ್ರೋಶಮಾಡತೊಡಗಿದರು. ಆಗ ಮಹಾರಾಜರು. ಎಲ್ಲರಿಗೂ ಸಮಾಧಾನ ಎಂದಿರಹೇಳಿ ಈ ಕಳ್ಳರ ಮುಖ್ಯನಾಯಕನಾರು? ಎಂದು ಕೂಗಿದರು. ಆಗ ವಿಠೂರಾಮೋಸಿಯು ಸೊಕ್ಕಿನಿಂದ—ನಾನೇ ಈ ಕಳ್ಳರ ಒಡೆಯನು ಎಂದು ಗದ್ದರಿಸುತ್ತ ಮಹಾರಾಜರೆಡೆಗೆ ಬಂದನು. ಆಗ—

ಮಹಾರಾಜರು—ನೀನು ಕಳವು ಮಾಡಹತ್ತಿ ಎಷ್ಟು ವರುಷಗಳಾದವು?

ವಿಠೂ.—ಹನ್ನೆರಡು ವರುಷ ಆಗಿರಬಹುದು.

ಮಹಾರಾಜರು—ಇಷ್ಟುದಿವಸ ಈ ಕೆಲಸ ಮಾಡಿದ ನೀನು ಈಗ್ಗೆ ಲಕ್ಷಾಧೀಶನಾಗಿರಬಹುದಲ್ಲವೇ?

ವಿಠೂ—ನಾನು ಹಾಗೆ ಲಕ್ಷಾಧೀಶನಾಗಿದ್ದರೆ ಮತ್ತೆ ಕಳವುಮಾಡ ಲಿಕ್ಕೆ ಯಾಕೆ ಬರುತ್ತಿದ್ದೆನು?

ಮಹಾರಾಜರು—ಹಾಗಾದರೆ ಸುಲಿಗೆಯಲ್ಲಿ ಸಿಕ್ಕ ದುಡ್ಡನ್ನೆಲ್ಲ ಏನು ಮಾಡುವೆ?

ವಿಠೂ—ಎಲ್ಲ ಭಾಗೀದಾರರಿಗೆ ಮುಟ್ಟಿಸಿ ನನಗೆ ಹೊಟ್ಟೆ-ಬಟ್ಟೆಗಳ ಮಟ್ಟಿಗೆ ಉಳಿಯಬೇಕಾದರೆ ಸಾಕುಸಾಕಾಗುವದು. ನನ್ನ ಕಳವು ನನಗೆ ದಕ್ಕಬೇಕಾದರೆ ನಾನು ಅಷ್ಟೊಂದು ದುಡ್ಡು ವೆಚ್ಚ ಮಾಡಲೇಬೇಕು.

ಮಹಾರಾಜರು—ಹೀಗಿದ್ದರೆ ಈ ಉದ್ಯೋಗವನ್ನೇಕೆ ಮಾಡುವಿ?

ವಿಠೂ—ಮತ್ತೇನು ಮಾಡಬೇಕು?

ಮಹಾರಾಜರು—ನೀನು ಮಾಡುವ ಈ ಕೆಲಸವು ಪಾಪಕರವೋ ಪುಣ್ಯಕರವೋ?

ವಿಠೂ—ಪಾಪದ್ದೇ ಸರಿ ಇದರಿಂದ ಪುಣ್ಯವು ಹ್ಯಾಗೆ ಬಂದೀತು?

ಮಹಾರಾಜರು—ಪಾಪದ ಕೆಲಸವೆಂದು ತಿಳಿದೂ ತಿಳಿದು ಯಾಕೆ ಈ ಉದ್ಯೋಗವನ್ನು ಮಾಡುವೆ?

ವಿಠೂ—ನನಗೆ ಬೇರೆ ಉದ್ಯೋಗವೇ ಇಲ್ಲ.

ಮಹಾರಾಜರು—ವ್ಯಾಪಾರೋದ್ಯೋಗ ಮಾಡಿದರೆ ನಿನ್ನ ಹೊಟ್ಟೆ ತುಂಬಲಾರದೇನು?

ವಿಠೂ—ವ್ಯಾಪಾರಕ್ಕೆ ಭಾಂಡವಲ ಬೇಕು.

ಮಹಾರಾಜರು—ನಾನು ನಿನಗೆ ಐದುಸಾವಿರ ರೂಪಾಯಿಗಳನ್ನು ಕೊಡುವೆನು. ಇವುಗಳಿಂದ ನೀನು ವ್ಯಾಪಾರ ಮಾಡು; ಹಾನಿಯಾದರೆ ನಾನು ತುಂಬಿ ಕೊಡುವೆನು.

ವಿಠೂ—ಮಹಾರಾಜ, ನಿಮ್ಮ ಹೆಸರೇನು?

ಮಹಾರಾಜರು—ನನಗೆ ಗೋಂದಾವಲಿಕರಬುವಾ ಎನ್ನುತ್ತಾರೆ.

ವಿಠೂ—ಮಹಾರಾಜ, ನಿಮ್ಮ ಸಂಗಡ ಮಾತುಮಾತಾಡುತ್ತಲೇ ನನ್ನ ದುಷ್ಟಬುದ್ಧಿಯು ನಷ್ಟವಾಗಿ ಹೋಯಿತು. ನನಗೆ ನಿಮ್ಮ ದುಡ್ಡುಬೇಡ. ನನ್ನ ಬಳಿಯಲ್ಲಿ ಐದು ಸಾವಿರ ರೂಪಾಯಿಗಳಿರುವವು. ನಿಮ್ಮ ಉಪದೇಶದಂತೆ ವ್ಯಾಪಾರ ಮಾಡುವೆನು. ಅದರಲ್ಲಿ ಹಾನಿಯಾದರೆ ನಿಮ್ಮ ಬಳಿಗೆ ಬರುವೆನು.

ವಿಠೂರಾಮೋಶಿಯಂಥ ಕಳ್ಳನು ಹೀಗೆ ಮಾತನಾಡಹತ್ತಿದ್ದನ್ನು ಕೇಳಿ ಮಹಾರಾಜರ ಸಂಗಡಿಗರಿಗೆ ಪರಮಾಶ್ಚರ್ಯವಾಯಿತು. ಸಜ್ಜನರ ಸಂಗಡ ಕೇವಲ ಸಂಭಾಷಣ ಮಾಡಿದ ಮಾತ್ರದಿಂದಲೇ ಈತನು ಇಷ್ಟೊಂದು ವಿವೇಕಶಾಲಿಯಾದನೆಂದು ಅವರು ತಿಳಿದರು. ವಸ್ತುಸ್ಥಿತಿಯಾದರೂ ಹೀಗೆಯೇ ಇತ್ತು. ವಿಠೂರಾಮೋಶಿಯು ವಿನಮ್ರನಾಗಿ ಮಹಾರಾಜರಿಗೆ ನಮಸ್ಕರಿಸಿ ಮುತ್ತಿಗೆಯನ್ನು ಕಿತ್ತುಕೊಂಡು ಹೊರಟು ಹೋದನು. ಇತ್ತ ಮಹಾರಾಜರು ಭಕ್ತರೊಡನೆ ಪಂಢರೀಯಾತ್ರೆಯನ್ನು ಮುಗಿಸಿಕೊಂಡು ಗೋಂದಾವಲಿಗೆ ಬಂದರು.

ವಿಠೂರಾಮೋಶಿಯು ಮಹಾರಾಜರ ಅಪ್ಪಣೆಯಮೇರೆಗೆ ಕಳ್ಳತನಕ್ಕೆ ರಾಮ ರಾಮ ಮಾಡಿ ತನ್ನಲ್ಲಿದ್ದ ಹಾಗು ತನ್ನ ಸಂಗಡಿಗರಲ್ಲಿದ್ದ ಬಂಡವಲವನ್ನೆಲ್ಲ ಒಟ್ಟುಗೂಡಿಸಿ ದೊಡ್ಡಪ್ರಮಾಣದಿಂದ ವ್ಯಾಪಾರ ಮಾಡಿದನು. ಅದರಲ್ಲಿ ಆತನಿಗೆ ವಿಶೇಷ ಲಾಭವಾಯಿತು. ಪ್ರತಿ ವರುಷಕ್ಕೆ ಆತನಿಗೆ ಸುಲಿಗೆಯಿಂದ ಎಷ್ಟು ದ್ರವ್ಯವು ಪ್ರಾಪ್ತವಾಗುತ್ತಿತ್ತೋ ಅದರ ಎರಡಷ್ಟು ದ್ರವ್ಯವು ಅವನಿಗೆ ಸಿಕ್ಕಿತು. ವಿಠೂರಾಮೋಶಿಯು ಮನಸ್ಸಿನಲ್ಲಿ ವಿಚಾರಮಾಡಿದನು. ಏನಂದರೆ—ನಾನು ಮಹಾಪಾಪಿಯು, ಆದರೂ ನನ್ನ ಮೇಲೆ ಅನುಗ್ರಹಮಾಡಿ ಗೋಂದಾವಲಿಕರ ಬುವಾನವರು ನನಗೆ ಉತ್ತಮ ದಾರಿಯನ್ನು ತೋರಿಸಿಕೊಟ್ಟರು. ನಿಶ್ಚಯವಾಗಿ

ಅವರು ಮಹಾತ್ಮರು ಇರಲೇಬೇಕು. ಹಾಗಲ್ಲದಿದ್ದರೆ ಅವರ ದರ್ಶನ ಮಾತ್ರದಿಂದ ನನ್ನ ದುರ್ಗುಣಗಳೆಲ್ಲ ಅಳಿದು ಹೋಗುವ ಬಗೆಯೆಂತು? ನಾನು ಅವರ ಬಳಿಗೆ ಹೋಗಿ ಅವರ ಭಕ್ತನಾಗಿ ಜನ್ಮಸಾರ್ಥಕಮಾಡಿ ಕೊಳ್ಳಬೇಕು.

ಈ ಮೇರೆಗೆ ಯೋಚಿಸಿ ವಿಠೂರಾಮೋಸಿಯು ತನ್ನ ಸಂಗಡಿಗರೊಡನೆ ಮಹಾರಾಜರ ದರ್ಶನಕ್ಕೆ ಹೋಗಿ—ನಾನು ದರ್ಶನಕ್ಕಾಗಿ ಊರಲ್ಲಿ ಬರಬೇಕೋ ಅಥವಾ ಮಹಾರಾಜರು ನಾನಿದ್ದಲ್ಲಿಗೇ ಬಂದು ದರ್ಶನ ಕೊಡುವರೋ ಎಂದು ಹೇಳಿಕಳಿಸಿದನು. ಮಹಾರಾಜರು ಆತನಿಗೆ ಊರಲ್ಲಿಯೇ ಬರಲು ಅಪ್ಪಣೆಯನ್ನಿತ್ತರು. ವಿಠೂರಾಮೋಸಿಯು ಈಗ ಕಳ್ಳನಾಗಿರದೆ ಸಭ್ಯಗೃಹಸ್ಥನಾಗಿದ್ದನು. ಉತ್ತಮ ವ್ಯಾಪಾರಸ್ಥನಾಗಿದ್ದನು. ಅವನು ಒಳ್ಳೇ ಭಕ್ತಿಯಿಂದ ಮಹಾರಾಜರ ಚರಣಕ್ಕೆರಗಿ ಕ್ಷಮೆ ಬೇಡಿಕೊಂಡನು. ಮಹಾರಾಜರು ಅವನಿಗೆ ಮತ್ತಿಷ್ಟು ಸದುಪದೇಶಮಾಡಿ ಇದೇ ರೀತಿ ಸಭ್ಯತನದಿಂದ ಕಾಲಕ್ರಮಣಮಾಡು ಎಂದು ಹೇಳಿದರು. ವಿಠೂರಾಮೋಸಿಯು ಮಹಾರಾಜರ ಭಕ್ತನಾಗಿ ಸುಖಶಾಂತಿಗಳನ್ನು ಹೊಂದಿದನು. ಸಜ್ಜನರ ಈ ಲೀಲೆಗಾಗಿ ಜನರು ಬೆರಗಾಗಿ ಹೋದರು. ಎಷ್ಟೋ ಜನರು ಒಂದೊಂದು ತಪಗಟ್ಟಲೆ ಬಳಿಯಲ್ಲಿದ್ದರೂ ಮಹಾರಾಜರು ಅವರ ದುರ್ಗುಣಗಳನ್ನು ಕಳೆಯದೆ ಕೇವಲ ಒಂದು ಗಳಿಗೆಯು ಸಹ ವಾಸಮಾಡಿದ ವಿಠೂರಾಮೋಸಿಯಂಥ ಕಳ್ಳನ ದುರ್ಗುಣ ಬಿಡಿಸಿದರಲ್ಲ? ಇದೇನು ಚಮತ್ಕಾರವೆಂದು ಜನರಾಡಿಕೊಳ್ಳಲಾರಂಭಿಸಿದರು. ಇದರ ಗೂಢವು ಯಾರಿಗೂ ತಿಳಿಯದಾಯಿತು. ಜ್ಞಾನಿಗಳಾದ ಮಹಾರಾಜರಿಗೆ ತಮ್ಮ ಪರಿವಾರಕ್ಕೆ ಬಂದ ಈ ಸಂಶಯದ ಸಂಗತಿಯು ತಿಳಿಯದೆ ಹೋಗಲಿಲ್ಲ. ಆಗ ಅವರು ಒಂದು ದಿನ ನಿರೂಪಣಕ್ಕೆ ಕುಳಿತಾಗ ಇದೇ ವಿಷಯವನ್ನೇ ತೆಗೆದು ಹೇಳಿದರೇನಂದರೆ—ಪ್ರಾಣಿಗಳ ಉದ್ಧಾರವಾಗ ಬೇಕಾದರೆ ಅವುಗಳ ಬಳಿಯಲ್ಲಿ ಪುಣ್ಯಸಂಚಯವಿರಬೇಕು. ಇಲ್ಲವೆ ಅತಿ

ಶಯ ಪಾಪವಾದರೂ ಇರಬೇಕು. ಒಮ್ಮೆ ಪಾಪದಿಂದ ರಸಾತಳಕ್ಕೆ ಮುಟ್ಟಿದ ಮನುಷ್ಯನು ಅದಕ್ಕೂ ಕೆಳಗೆ ಹೋಗುವದೆಲ್ಲಿ? ಅವನು ಮೇಲಕ್ಕೆ ಬರಲೇಬೇಕು. ಪುಣ್ಯಶಾಲಿಯಾದವನಂತೂ ಮೇಲೆ ಇದ್ದೇ ಇರುವನು. ವಿಠೂಬಾಮೋಸಿಯು ಅಸಂಖ್ಯ ಗೋಹತ್ಯೆ, ನರಹತ್ಯೆ, ಸ್ತ್ರೀಹತ್ಯೆ, ಬ್ರಹ್ಮ ಹತ್ಯೆ ಮೊದಲಾದ ಪಾಪಗಳನ್ನಾಚರಿಸಿ ಕೇವಲ ಪಾಪದ ಮೂರ್ತಿಯಾಗಿದ್ದನು. ಅವನಂಥ ಪಾಪಿಷ್ಠನು ಸಿಕ್ಕುವದೇ ವಿರಳವೆಂದು ಹೇಳಬಹುದು. ಜಗತ್ತಿನಲ್ಲಿ ಎಷ್ಟು ಪಾಪದ ಕೆಲಸಗಳಿರುವವೋ ಅಷ್ಟು ಪಾಪದ ಕೆಲಸಗಳು ಅವನಿಂದ ಸಂಭವಿಸಿದ್ದವು. ಆದ್ದರಿಂದ ಕೇವಲ ಪಾಪಿಷ್ಠನಾದ ಅವನನ್ನು ಆ ಕೂಡಲೆ ಉದ್ಧರಿಸುವದು ಸಜ್ಜನರಿಗೆ ಕರ್ತವ್ಯವಾಯಿತು. ಮಕ್ಕಳು ಕೇವಲ ಸಂಕಟದಲ್ಲಿ ಬಿದ್ದಾಗ ತಾಯಿಯು ಹ್ಯಾಗೆ ಧಾವಿಸಿ ಹೋಗಿ ಮಕ್ಕಳನ್ನು ಆ ಸಂಕಟದಿಂದ ಹ್ಯಾಗೆ ಬಿಡಿಸುವಳೋ ಹಾಗೆ ಪಾಪದಿಂದ ತೀರ ನಿಕೃಷ್ಟಸ್ಥಿತಿಹೊಂದಿದವರನ್ನು ಸಜ್ಜನರು ಉದ್ಧರಿಸುವರು. ಆದ್ದರಿಂದಲೇ ವಿಠೂರಾಮೋಶಿಯು ಅಲ್ಪಹೊತ್ತಿನ ಸಹವಾಸದಿಂದ ವಿವೇಕವನ್ನು ತಾಳಿ ಸಜ್ಜನನಾದನು. ಇನ್ನು ಮುಂದೆ ಅವನಿಗೆ ದುಷ್ಕರ್ಮಪ್ರವೃತ್ತಿಯು ಎಂದೂ ಆಗದು. ಅವನು ಶ್ರೀರಾಮನ ಅನುಗ್ರಹಕ್ಕೆ ಪಾತ್ರನಾಗಿ ಸಾಯುಜ್ಯಮುಕ್ತಿಯನ್ನು ಹೊಂದುವನು. ಮನುಷ್ಯನಿಗೆ ಉದ್ಧಾರದ ಕಾಲವು ಒಂತೆಂದರೆ ಹೀಗೆ ಯೋಗವು ಒದಗಿ ಬರುವದು. ಆ ಮಹಾಪಾಪಿಗೆ ಸಜ್ಜನರ ಸಹವಾಸವು ಅಲ್ಪ ಮಾತ್ರವಾದರೂ ಲಭಿಸದಿದ್ದರೆ ಅವನು ಸೂರ್ಯ-ಚಂದ್ರರಿರುವವರೆಗೆ ರೌರವನರಕದಲ್ಲಿ ಬೀಳುತ್ತಿದ್ದನು. ಸಜ್ಜನರ ಸಹವಾಸ ಮಾಡಿದವರು ಎಂದೂ ಅಸಮಾಧಾನವನ್ನು ತಾಳಬಾರದು. ನಮ್ಮ ಬಳಿಗೆ ಬಂದು ಸೇವೆ ಮಾಡಿದವರಿಗೆಲ್ಲ ನಮ್ಮ ವಿಳಾಸವು ಬಿದ್ದು ಹೋಗಿದೆ. ಅವರ ಉದ್ಧಾರವು ಈಗಲ್ಲದಿದ್ದರೂ ಜನ್ಮಾಂತರದಲ್ಲಾದರೂ ಆಗೇ ತೀರುವದು. ಸಜ್ಜನರಿಗೆ ಅನುಗ್ರಹ ಮಾಡಲಿಕ್ಕೆ ಯಾವದೊಂದು ಬಲವತ್ತರ ಕಾರಣವು ಬೇಕಾಗುತ್ತದೆ.

ಅವರ ಅಂತಃಕರಣವು ಕರಗಬೇಕಾಗುತ್ತದೆ. ಸಜ್ಜನರ ದಯೆಗೆ ಪಾತ್ರವಾಗುವಂತೆ ನೀವು ನಿಮ್ಮ ಆಚರಣೆಯನ್ನಿಟ್ಟರೆ ಈ ಕ್ಷಣದಲ್ಲಿಯೇ ನೀವು ಉದ್ಧೃತರಾಗುವಿರಿ. ಅಂಥ ಅಧಿಕಾರವು ಯಾರಲ್ಲಾದರೂ ಇದ್ದರೆ ಪರೀಕ್ಷಿಸಿ ನೋಡಬಹುದು.

ಈ ಮೇರೆಗೆ ಮಹಾರಾಜರು ಮಾತನಾಡಲು ಎಲ್ಲರೂ ಸುಮ್ಮನೇ ಕುಳಿತರು. ತಮ್ಮ ಪರಿವಾರದಲ್ಲಿದ್ದವರ ಯೋಗ್ಯತೆಯು ಮಹಾರಾಜರಿಗೆ ಗೊತ್ತಿದ್ದದ್ದರಿಂದ ಅವರು ಆ ದಿನ ಆ ವಿಷಯವನ್ನು ಅಷ್ಟಕ್ಕೇ ಬಿಟ್ಟು ಶ್ರೀದಾಸಬೋಧ ವಿಷಯವನ್ನು ಪ್ರಾರಂಭಿಸಿದರು. ಅಂದು ಮಹಾರಾಜರ ಸೇವಕರಿಗೆ ನಾವು ಹ್ಯಾಗೆ ನಡೆದರೆ ಮಹಾರಾಜರ ಅನುಗ್ರಹವು ನಮ್ಮ ಮೇಲೆ ಬರುವದು ಒಂದು ವಿಷಯವಾಗಿ ಬಹಳ ಚಡಪಡಿಕೆಯಾಯಿತು. ಆದರೆ ಹಾಗೆ ನಡೆಯುವಿಕ್ಕೆ ಬಾರದ್ದರಿಂದ ಕೊನೆಯ ವರೆಗೂ ಅವರು ಕಚ್ಚಾಸ್ಥಿತಿಯಲ್ಲಿಯೇ ಉಳಿಯಬೇಕಾಯಿತು. ಪರಮಪುಣ್ಯಶಾಲಿಗಳಾದ ಕೆಲಜನರು ಮಾತ್ರ ಬ್ರಹ್ಮಾನಂದವನ್ನು ಹೊಂದಿ ಸದ್ಗುರುಸೇವೆಯಿಂದ ಧನ್ಯರಾದರು.

---

## ೨೦ನೆಯ ಅಧ್ಯಾಯ—ಗೋಸಂರಕ್ಷಣ.



ಗೋವು ಸಾಮಾನ್ಯವಾದ ಪ್ರಾಣಿಯಲ್ಲ. ಮೂವತ್ತುಮೂರು ಕೋಟಿ ದೇವತೆಗಳೂ ಅದನ್ನು ಆಶ್ರಯಿಸಿರುವರು. ಅದು ಪ್ರತ್ಯಕ್ಷ ಕಾಮಧೇನುವು; ವೈದಿಕಧರ್ಮದಲ್ಲಿ ಧೇನುಪಿನ ಅಂದರೆ ಆಕಳದ ಮಹತ್ವವನ್ನು ವಿಶೇಷವಾಗಿ ವರ್ಣಿಸಿರುತ್ತದೆ. ಇದು ಪಶುಕೋಟಿಯಲ್ಲಿ ಗಣಿಸಲ್ಪಟ್ಟರೂ ಪೂಜ್ಯದೈವತವಾಗಿರುವದು. ಅಂದರೆ ಅಷ್ಟೊಂದು ಪವಿತ್ರತೆಯು ಅದರಲ್ಲಿರುವದು. ತುಳಸಿಯು ಗಿಡವಾಗಿದ್ದರೂ ಹ್ಯಾಗೆ ಪೂಜ್ಯವೋ ಹಾಗೆ ಆಕಳವು ಪಶುವಾಗಿದ್ದರೂ ಪೂಜ್ಯವಾಗಿರುವದು. ಪೂರ್ವದಲ್ಲಿ

ರಾಜರು ಆಕಳುಗಳನ್ನು ಬಹು ದಕ್ಷತೆಯಿಂದ ರಕ್ಷಿಸುತ್ತಿದ್ದರು. ಗೋಧನವೇ ಎಲ್ಲಕ್ಕೂ ಶ್ರೇಷ್ಠವಾದ ಧನವಾಗಿತ್ತು. ಪೂಜ್ಯರಿಗೆ ದಾನ ಕೊಡಬೇಕಾದರೆ ಈ ಗೋಧನವನ್ನೇ ಕೊಡುತ್ತಿದ್ದರು. ಆಕಳಲ್ಲಿ ಅಂಥ ಮಹತ್ವದ ಗುಣವಿರುವದರಿಂದಲೇ ನಮ್ಮ ಪ್ರಾಚೀನರು ಆವುಗಳನ್ನು ಸಂರಕ್ಷಿಸುತ್ತ ಬಂದರು. ಮತ್ತು ಗೋಕ್ಷೀರ ಪಾನದಿಂದ ಮೇಧಾವಿಗಳೂ, ತೇಜಸ್ವಿಗಳೂ ಆಗಿ ಲೋಕೋತ್ತರ ಕೀರ್ತಿಶಾಲಿಗಳಾದರು. ಆದರೆ ಅವರ ಸಂತತಿಯವರಾದ ನಾವು ಗೋವನ್ನು ರಕ್ಷಿಸದೆ ಪರದಾಸ್ಯಪಂಕದಲ್ಲಿ ಬಿದ್ದು ಹೊರಳಾಡುತ್ತಿರುವೆವು. ನಮಗೆ ಇಂಥ ಹೀನದೆಶೆ ಪ್ರಾಪ್ತವಾದದ್ದನ್ನು ಕಂಡು ಮಹಾರಾಜರು ಬಹಳವಾಗಿ ಮರಗುತ್ತಿದ್ದರು. ಮತ್ತು ಗೋಸಂರಕ್ಷಣೆ ಮಾಡಿರಿ. ಗೋಕ್ಷೀರ ಪಾನ ಮಾಡಿರಿ ಮೇಧಾವಿಗಳಾಗಿರಿ. ಬಲಶಾಲಿಗಳಾಗಿರಿ ಎಂದು ಉಪದೇಶಿಸುತ್ತಿದ್ದರು. ಅವರು ಬರಿಯ ಉಪದೇಶ ಮಾಡುತ್ತಿದ್ದರೆಂತಲ್ಲ ಪ್ರತ್ಯಕ್ಷ ಗೋಸಂರಕ್ಷಣೆಯನ್ನು ಮಾಡಿ ತೋರಿಸುತ್ತಿದ್ದರು. ಖುದ್ದ ಅವರ ಒಳಿಯಲ್ಲಿ ಗೋಸಂಖ್ಯೆಯು ತೃಪ್ತಿಕರವಾಗಿರುತ್ತಿತ್ತು. ಇದಲ್ಲದೆ ಅವರು ಕಟಕರ ಕೈಯಲ್ಲಿ ಸೇರುವ ಸಾವಿರಾರು ಆಕಳಗಳನ್ನು ಬಿಡಿಸುತ್ತಿದ್ದರು. ಗೋಂದಾವಲಿಗೆ ಸಮೀಪವಾಗಿ ಮ್ಹಸವಡ ಎಂಬ ಗ್ರಾಮವಿರುವದು; ಅಲ್ಲಿ ಪ್ರತಿವರುಷ ದನದ ದೊಡ್ಡ ಜಾತ್ರೆ ನೆರೆಯುವದು. ಕಟುಕರು ಇಲ್ಲಿ ಸಾವಿರಾರು ದನಗಳನ್ನು ಕೊಂಡುಕೊಳ್ಳುವರು. ಮಹಾರಾಜರು ಸ್ವತಃ ಈ ಜಾತ್ರೆಗೆ ಹೋಗಿ ಆಕಳುಗಳನ್ನು ಕಟುಕರಿಗೆ ಮಾರಬೇಡಿರೆಂದು ಜನರಿಗೆ ಉಪದೇಶ ಮಾಡುವದಲ್ಲದೆ ತಮ್ಮ ಒಳಿಯಲ್ಲಿದ್ದ ರೂಪಾಯಿ ವೆಚ್ಚ ಮಾಡಿ ಕಟುಕರಿಗೆ ಮಾರುವ ದನಗಳನ್ನು ತಾವು ಕೊಂಡುಕೊಂಡು ಸಜ್ಜನ ರೈತರಿಗೆ ಕೊಡುತ್ತಿದ್ದರು. ಮಹಾರಾಜರು ಜಾತ್ರೆಗೆ ಬಂದರೆಂದರೆ ಕಟುಕರಿಗೆ ಒಂದು ದನವು ಕೂಡ ಸಿಗದೆ ಹೋಗುತ್ತಿತ್ತು. ಅನೇಕ ಸಾರೆ ಹೀಗೆ ಆ ಜಾತ್ರೆಗೆ ಹೋಗಿ ಮಹಾರಾಜರು ಜನರಲ್ಲಿ ಗೋಸಂರಕ್ಷಣೆಯ ಬಗ್ಗೆ ಜಾಗ್ರತೆಯನ್ನುಂಟು

ಮಾಡುತ್ತಿದ್ದರು. ಹೀಗಿರಲು ಒಮ್ಮೆ ಮಹಾರಾಜರು ಒರುವಷ್ಟರಲ್ಲಿ ಕಟುಕರು ಎಲ್ಲ ದನಗಳನ್ನೂ ಕೊಂಡುಕೊಂಡು ದಾರೀಹಿಡಿದಿದ್ದರು. ಸರ್ವಾಂತರ್ಯಾಮಿಗಳಾದ ಮಹಾರಾಜರು ಅದನ್ನು ತಿಳಿದು ಕಟುಕರಿದ್ದಲ್ಲಿಗೆ ಹೋಗಿ ದನಗಳಿಗೆ ಕೊಟ್ಟ ಬೆಲೆಯನ್ನು ತಕ್ಕೊಂಡು ಎಲ್ಲ ಆಕಳುಗಳನ್ನು ನಮಗೆ ಕೊಡಿರಿ ಎಂದು ಕೇಳಿದರು. ಆದರೆ ಕಟಕರು ಮಹಾರಾಜರಲ್ಲಿದ್ದ ಸಾಮರ್ಥ್ಯವನ್ನು ಪರೀಕ್ಷಿಸುವದಕ್ಕೋಸ್ಕರ ಒಂದು ಹಂಚಿಕೆಯನ್ನು ಮಾಡಿದರು. ಅವರು ಹೇಳಿದ್ದೇನಂದರೆ—"ನೀವು ದನಗಳ ಬೆಲೆಯನ್ನು ನಮಗೆ ಕೊಡುವ ಕಾರಣವಿಲ್ಲ ಆದರೆ ನಮ್ಮ ಒಳಿಯಲ್ಲಿದ್ದ ದನಗಳನ್ನು ನೀವು ಕರೆದ ಕೂಡಲೆ ಅವು ನಿಮ್ಮ ಬಳಿಗೆ ಬರಬೇಕು. ಅಂದರೆ ನಾವು ನಿಮಗೆ ಈ ದನಗಳನ್ನೆಲ್ಲ ಬಿಟ್ಟು ಕೊಡುವೆವು."

ಈ ಮೇರೆಗೆ ಕಟಕರು ಮಾತನಾಡಲು ಮಹಾರಾಜರು ಹಾಗೇ ಆಗಲೆಂದರು. ಆಗ ಕಟಕರು ಎಲ್ಲ ದನಗಳ ಮುಂದೆ ಹಸೀಮೇವನ್ನು ಹಾಕಿ ಅವು ತಿನ್ನ ಹತ್ತಿದಾಗ ಮಹಾರಾಜರಿಗೆ ದನಗಳನ್ನು ಕರೆಯ ಹೇಳಿದರು. ಆಗ ಮಹಾರಾಜರು ಎರಡೂ ಕೈಗಳನ್ನು ಮೇಲಕ್ಕೆತ್ತಿ ಗೋದೆ, ಗಂಗೆ, ಯಮುನೆ, ಸರಸ್ವತಿ ಎಂಬ ಹೆಸರುಗಳಿಂದ ಎಲ್ಲ ದನಗಳನ್ನೂ ಕರೆದರು. ಇವರ ದನಿ ಕೇಳಿದ ಕೂಡಲೆ ಎಲ್ಲ ದನಗಳು ಬಾಲವನ್ನು ಮೇಲಕ್ಕೆತ್ತಿಕೊಂಡು ಹಸೀಮೇವನ್ನು ಬಿಟ್ಟುಕೊಟ್ಟು ಇವರ ಬಳಿಗೆ ಓಡಿ ಬಂದವು. ಎಷ್ಟೋ ದನಗಳು ಅವರ ಕೈಕಾಲು ಮೈ ಮೊದಲಾದವುಗಳನ್ನು ನೆಕ್ಕ ತೊಡಗಿದವು. ಈ ಅದ್ಭುತ ಚಮತ್ಕಾರವನ್ನು ನೋಡಿ ಕಟಕರಿಗೆ ಆಶ್ಚರ್ಯವಾಯಿತು. ಅವರು ಮಹಾರಾಜರಿಗೆ ದಂಡವತ್ ನಮಸ್ಕರಿಸಿ ಎಲ್ಲ ಆಕಳುಗಳನ್ನು ಅವರಿಗೆ ಕೊಟ್ಟು ಬಿಟ್ಟರು. ಮಹಾರಾಜರಲ್ಲಿ ಪಶುಗಳು ಕೂಡ ಇಷ್ಟು ಪ್ರೇಮ ಮಾಡುವದನ್ನು ನೋಡಿ ಜನರಿಗೆ ತುಂಬಾ ಆಶ್ಚರ್ಯವಾಯಿತು.

ಮತ್ತೊಂದು ಸಾರೆ ಮಹಾರಾಜರು ವ್ಹಸವಡದಲ್ಲಿ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಊಟಕ್ಕೆ ಕುಳಿತಿರಲು, ಬೀದಿಯಲ್ಲಿ ಒಂದು ಆಕಳವು ಆರ್ತಧ್ವನಿಯಿಂದ ಒದರಿತು. ಕೂಡಲೆ ಮಹಾರಾಜರು ಊಟವನ್ನು ಬಿಟ್ಟೆದ್ದು ಬೀದಿಗೆ ಬಂದರು. ಒಂದು ಆಕಳವು ಮಲಗಿದ್ದು, ಒಬ್ಬ ಕಟುಕನು ಅದನ್ನು ಬಡಿಗೆಯಿಂದ ಹೊಡೆಯುತ್ತಿದ್ದನು. ಮಹಾರಾಜರು ಲಗಬಗೆಯಿಂದ ಆ ಕಟುಕನ ಬಳಿಗೆ ಹೋಗಿ, ಅಪ್ಪಾ, ಈ ಆಕಳನ್ನು ಹೀಗೆ ನಿಷ್ಕಾರಣವಾಗಿ ಯಾಕೆ ಹೊಡೆಯುತ್ತೀ; ಇದರ ಬೆಲೆ ಏನು ಹೇಳು ಕೊಟ್ಟು ಬಿಡುತ್ತೇನೆ ಎಂದರು. ಆಗ ಕಟುಕನು—ಏನು ಹೇಳಬೇಕರೀ, ಗೋಂದಾವಲಿ ಸಾಧುಗಳ ಕಾಲಾಗ ನಮಗ ಸುಖ ಇಲ್ಲ. ಪ್ಯಾಟಿಯಲ್ಲಿ ಒಂದು ದನ ಕೂಡಾ ನಮಗೆ ಸಿಕ್ಕಿಲ್ಲ. ಇದೊಂದು ಅವರ ಕಣ್ಣು ತಪ್ಪಿ ಸಿಕ್ಕಿತು; ಆದರೆ ಇದು ಇಲ್ಲಿಯ ವರೆಗೆ ಬಂದು ಮಲಗಿ ಬಿಟ್ಟಿತು. ಇದನ್ನು ಮಾರಲಿಕ್ಕೆ ನಾನು ಕೊಡುವದಿಲ್ಲ. ಎಂದು ನುಡಿದು ಮತ್ತೆ ಹೊಡೆಯ ಹತ್ತಿದನು. ಅಷ್ಟರಲ್ಲಿ ಮಹಾರಾಜರ ಮಾಯಾ ಪ್ರಭಾವದಿಂದ ಒಬ್ಬ ಸರಕಾರೀ ಅಧಿಕಾರಿಯು ಅಲ್ಲಿಗೆ ಬಂದನು. ಅವನು ಕಟುಕನನ್ನು ಬೆದರಿಸಿ ಆ ಆಕಳವನ್ನು ಕೊಂಡುಕೊಂಡು ಮಹಾರಾಜರಿಗೆ ಸಮರ್ಪಿಸಿದನು. ಆಕಳವು ಮಹಾರಾಜರ ಬೆನ್ನು ಹತ್ತಿ ನಡೆಯಿತು. ಬಳಿಕ ಮಹಾರಾಜರು ಆ ಆಕಳವನ್ನು ಒಬ್ಬ ರೈತನಿಗೆ ಕೊಟ್ಟರು. ಮತ್ತೊಮ್ಮೆ ಮಹಾರಾಜರು ವ್ಹಸವಡಕ್ಕೆ ಹೋದಾಗ ಆ ಆಕಳವು ಮಹಾರಾಜರನ್ನು ನೋಡಿದ ಕೂಡಲೆ ಅವರ ಬಳಿಗೆ ಬಂದಿತು. ಆಗ ಮಹಾರಾಜರು ಆ ಆಕಳದ ಮೇಲೆ ಕೈಯಾಡಿಸಿ ಆ ರೈತನಿಂದ ಆ ಆಕಳವನ್ನು ಒಬ್ಬ ಬ್ರಾಹ್ಮಣನಿಗೆ ಕೊಡಿಸಿದರು. ಆಕಳವು ಬ್ರಾಹ್ಮಣನ ಸಂಗಡ ಹೋಗದಾಗಲು ಮಹಾರಾಜರು—ಮಗಳೇ, ಹೀಗೆ ಮಾಡಬಾರದು. ಕನ್ನಿಕೆಯು ಕೊಟ್ಟ ಮನೆಯಲ್ಲಿ ಸುಖದಿಂದಿರುವಂತೆ ನೀನು ಕೊಟ್ಟ ಮನೆಯಲ್ಲಿ ಸುಖವಾಗಿ ಇರಬೇಕು. ಎಂದರು. ಅವರ ಮಾತು ಅದಕ್ಕೆ ತಿಳಿಯಿತೋ

ಏನೋ? ಎಂಬದು ತಿಳಿಯದು. ಕೂಡಲೆ ಅದು ಆ ಬ್ರಾಹ್ಮಣನನ್ನು ಬೆನ್ನತ್ತಿ ಹೋಯಿತು. ಬಳಿಕ ಮಹಾರಾಜರು ನೆರೆದವರಿಗೆ ಗೋರಕ್ಷಣೆಯ ವಿಷಯವಾಗಿ ವಿಶದವಾಗಿ ಬೋಧ ಮಾಡಿದರು. ತಾಯಿಯನ್ನು ಜೋಪಾನ ಮಾಡುವಂತೆ ಈ ಗೋಮಾತೆಯನ್ನು ರಕ್ಷಿಸಬೇಕು. ಗೋ-ಮಾತೆಯ ಸೇವೆಗೆ ವಿಮುಖನಾಗಬಾರದು. ಭಗವಂತನು ಗೋಬ್ರಾಹ್ಮಣಪ್ರತಿಪಾಲಕನಿರುವನು. ಅಂದರೆ ಗೋಗಳೂ, ಬ್ರಾಹ್ಮಣರೂ ಅವನಿಗೆ ಪ್ರಿಯರು. ಭಗವಂತನಿಗೆ ಪ್ರಿಯವಾದ ಇಂಥ ಗೋವನ್ನು ಸಂರಕ್ಷಿಸುವದರಿಂದ ಮನುಷ್ಯನು ಇಹ-ಪರ ಸೌಖ್ಯಗಳನ್ನು ಹೊಂದುವನು. ಗೋಮೂತ್ರ ಪಾನದಿಂದ ದೊಡ್ಡ ದೊಡ್ಡ ರೋಗಗಳು ನಿವಾರಣವಾಗುವವು. ಗೋಕ್ಷೀರಪಾನದಿಂದ ಬುದ್ಧಿ ವೈಭವವು ಬೆಳೆಯುವದು. ಅಂತೇ ನಮ್ಮ ಪ್ರಾಚೀನರು ಯಾವದೊಂದು ಅಶುಚಿತ್ವ ಪ್ರಾಪ್ತವಾದಾಗ ಪಂಚಗವ್ಯ ತಕ್ಕೊಂಡ ಹೊರತು ಮನುಷ್ಯನು ಶುದ್ಧನಾಗುವದಿಲ್ಲೆಂದು ಒರೆವಿಟ್ಟಿರುವರು. ಜನರು ಆಕಳದ ಮಹತ್ವವನ್ನು ಯಥಾರ್ಥವಾಗಿ ಅರಿಯಬೇಕು. ಹಾಗು ಅದನ್ನು ಸಂರಕ್ಷಿಸಬೇಕು.

ಈ ಮೇರೆಗೆ ಮಹಾರಾಜರು ಬೋಧಮಾಡಿ ಆಕಳ ಮಹತ್ವವನ್ನು ಜಗತ್ತಿನ ನಿದರ್ಶನಕ್ಕೆ ತಂದುಕೊಟ್ಟರು. ಶ್ವಾನಪುಚ್ಛದಂತೆ ಅಜ್ಞಾನಿಗಳಾದ ನಮ್ಮಂಥವರ ಸ್ಥಿತಿಯಿರುವದು. ದೊಡ್ಡವರು ಉಪದೇಶಮಾಡಿದಾಗ ಮಾತ್ರ ನಮ್ಮ ಮನಸ್ಸು ಆ ವಿಷಯದಲ್ಲಿ ಭಕ್ತಿಯನ್ನು ತಾಳುವದು. ಆದರೆ ಕೆಲದಿನಗಳು ಕ್ರಮಿಸಿದ ಬಳಿಕ ನಮ್ಮ ಸ್ವಭಾವವು ಪುನಃ ಮೊದಲಿನಂತಾಗುವದು. ನಮ್ಮ ಸ್ಥಿತಿಯು ಹೀಗಿರುವದರಿಂದಲೇ ನಾವು ಯಾವ ದಂಡೆಗೂ ಹತ್ತದೆ ಸಂಸಾರಸಾಗರದಲ್ಲಿ ಮುಣುಮುಣುಗಿ ಏಳುತ್ತಿರುವೆವು. ಮಹಾರಾಜರಂಥ ಮಹಾತ್ಮರು ಕಾಲಕಾಲಕ್ಕೆ ಅವತರಿಸಿ ನಮಗೆ ಎಷ್ಟು ಸದುಪದೇಶ ಮಾಡಿದರೂ ಬೋರ್ಗಲ್ಲಿನ ಮೇಲೆ ಮಳೆಗರೆದಂತೆ ಅವರ ಉಪದೇಶಾಮೃತವನ್ನು ವ್ಯರ್ಥವಾಗಿ ಮಾಡುವೆವು.

ನಾವು ಅಷ್ಟೊಂದು ಮೋಹಪಾಶದಲ್ಲಿ ಸಿಕ್ಕಿರುತ್ತೇವೆ. ಜನ್ಮಜನ್ಮಾಂತರ ಸಂಸ್ಕಾರದಿಂದ ಪ್ರಾಪಂಚಿಕ ಮೋಹವು ನಮ್ಮನ್ನು ತನ್ನ ಸ್ವಾಧೀನದಲ್ಲಿ ರಿಸಿಕೊಂಡಿದೆ. ಅಂತೇ ಸತ್ಪುರುಷರ ಹಿತವಚನಗಳ ಕಡೆಗೆ ನಮ್ಮ ಲಕ್ಷವು ಹೋಗುವದಿಲ್ಲ. ಮಡದಿಯ ಬೆಡಗಿಗೆ ಮರುಳಾದ ವಿಷಯಾಂಧನು ಜನ್ಮದಾತ್ರಿಯಾದ ತಾಯಿಯನ್ನು ಹೊಡೆದಟ್ಟುವಂತೆ ನಮ್ಮ ಸ್ಥಿತಿಯಾಗಿದೆ. ವಿಷಯುಗಳ ಬಲಿಗೆ ಸಿಕ್ಕ ನಮಗೆ ಸಜ್ಜನರ ಹಿತವಚನಗಳು ಸರಿಬರುವದಿಲ್ಲ. ಅವರು ಒಂದನ್ನು ಹೇಳಿದರೆ ನಾವು ಮತ್ತೊಂದನ್ನು ಮಾಡುವೆವು. ನಮಗೆ ಅನುಕೂಲವಾದಂತೆ ನಾವು ನಡೆಯುವೆವಲ್ಲದೆ ಸಜ್ಜನರ ಹಿತವಚನಗಳಂತೆ ನಡೆಯಲಾರೆವು. ಇದರಿಂದ ನಾವೇ ಕಷ್ಟ ಪಡುವೆವಲ್ಲದೆ ಬೇರಿಲ್ಲ. ಪ್ರಿಯವಾಚಕರೇ, ಸಜ್ಜನರಲ್ಲಿ ಅಷ್ಟೊಂದು ದೃಢಭಕ್ತಿಯು ನಮ್ಮಲ್ಲುವಿಸಬೇಕಾದರೆ ನಮ್ಮ ಉದ್ಧಾರದ ಯೋಗವು ಬಂದಿರಬೇಕು. ಅಂದರೇ ಹಾಗೆ ನಮಗೆ ಮತಿಯುಂಟಾಗುವದು. ಮಹಾರಾಜರು ಹೇಳಿದಂತೆ ಸಜ್ಜನರ ಕಡೆಗೆ ಹೋದ ಮನುಷ್ಯನು ಒಂದಿಲ್ಲೊಂದು ಜನ್ಮದಲ್ಲಿ ಉದ್ಧೃತನಾಗುವನು. ಇದಕ್ಕೆ ದೊಡ್ಡವರ ವಚನಗಳೇ ಸಾಕ್ಷಿಯು. ಮಹಾರಾಜರು ಉದ್ಧಾರಾಗುವ ಮಾರ್ಗವನ್ನು ಜಗತ್ತಿಗೆ ತೋರಿಸಿದಂತೆ ಗೋಮಾತೆಯ ಮಹತ್ವವನ್ನೂ ಜಗತ್ತಿಗೆ ತೋರಿಸಿಕೊಟ್ಟರು. ಪುಣ್ಯಶಾಲಿಗಳಾದವರು ಆ ಮಹಾತ್ಮರ ಉಪದೇಶದಂತೆ ಇದುವರೆಗೂ ಗೋಮಾತೆಯ ಸಂರಕ್ಷಣದಲ್ಲಿ ತತ್ಪರರಾಗಿರಬಹುದು. ಮನುಷ್ಯನಿಗೆ ಸ್ವಂತಹಿತದ ದೃಷ್ಟಿಯಿಂದಲೂ ರಾಷ್ಟ್ರಹಿತದ ದೃಷ್ಟಿಯಿಂದಲೂ ಗೋಮಾತೆಯ ಸಂರಕ್ಷಣವು ಅತ್ಯಂತ ಹಿತಕರವಿರುವದರಿಂದ ಆ ಕಡೆಗೆ ಸಮಸ್ತರೂ ಲಕ್ಷಗೊಡುವದು ಶ್ರೇಯಸ್ಕರವು. ಕಟುಕರಿಗೆ ಮಾರುವದನ್ನು ಸರ್ವಥಾತ್ಯಜಿಸಬೇಕು. ಈ ಮಾತನ್ನೊಂದು ಲಕ್ಷದಲ್ಲಿಟ್ಟರೆ ಮನುಷ್ಯನಿಗೆ ಕೋಟಿಕಲ್ಯಾಣವಾಗುವದು.

## **೨೧ನೆಯ ಅಧ್ಯಾಯ**—ಕರ್ನಾಟಕಕ್ಕೆ ಆಗಮನ.

( ೧೯೦೯ ಇಸ್ವಿ. )



ಶ್ರೀಮಹಾರಾಜರ ಮುಖ್ಯ ಶಿಷ್ಯರಾದ ಬ್ರಹ್ಮಾನಂದಬುವಾನವರು ಗದಗಿನ ಬಳಿಯಲ್ಲಿರುವ ಬೆಳಧಡಿಯಲ್ಲಿರುತ್ತಿದ್ದರು. ಅಲ್ಲಿ ಅವರು ಶ್ರೀ ರಾಮಸ್ಥಾಪನೆಮಾಡಿ ಜನರಲ್ಲಿ ಭಕ್ತಿಮಾರ್ಗವನ್ನು ವಿಶೇಷವಾಗಿ ಪ್ರಸಾರ ಗೊಳಿಸಿದರು. ಮಹಾರಾಜರ ದಿವ್ಯ ತೇಜಸ್ಸು ಬ್ರಹ್ಮಾನಂದರಲ್ಲಿ ಓತ ಪ್ರೋತವಾಗಿ ತುಂಬಿಕೊಂಡದ್ದರಿಂದ ಅವರೂ ಪ್ರತಿಮಹಾರಾಜರಂತೆ ಒಪ್ಪುತ್ತಿದ್ದರು. ನಮ್ಮ ಕರ್ನಾಟಕದಲ್ಲಿ ಬ್ರಹ್ಮಾನಂದರಿಂದ ಅನುಗ್ರಹೀ ತರಾದ ಜನರು ಹಲವರಿರುವರು. ಸಜ್ಜನರಿಗೆ ಶರಣುಹೋದ ಪುಣ್ಯಶಾಲಿ ಗಳು ಸಜ್ಜನರಂತೆಯೇ ಆಗುವರೆಂಬದು ಇಂಥ ಮಹಾನುಭಾವರಿಂದಲೇ ವ್ಯಕ್ತವಾಗುವದು. ಈ ಬ್ರಹ್ಮಾನಂದರ ಪುಣ್ಯದಿಂದಲೇ ಮಹಾರಾಜರ ದರ್ಶನವು ನಮ್ಮ ಕರ್ನಾಟಕಕ್ಕೆ ಆಯಿತು. ಕರ್ನಾಟಕದ ಭಕ್ತರು ಮಹಾ ರಾಜರನ್ನು ಕರಕೊಂಡು ಬರಬೇಕೆಂದು ಬ್ರಹ್ಮಾನಂದರಿಗೆ ದುಂಬಾಲ ಬಿದ್ದರು. ಭಕ್ತರ ಇಚ್ಛಾಪೂರಣಾರ್ಥವಾಗಿ ಬ್ರಹ್ಮಾನಂದರು ಮಹಾರಾ ಜರನ್ನು ಕರಕೊಂಡು ಬರಬೇಕಾಯಿತು. ದೊಡ್ಡವರ ಆಗಮನಕ್ಕೆ ಏನಾದರೊಂದು ನಿಮಿತ್ತವು ಬೇಕಾಗುತ್ತದೆ. ಮತ್ತು ಅವರು ಬಂದು ಹೋದ ಹೆಗ್ಗುರತವು ಜನರಲ್ಲಿ ಚಿರಕಾಲವುಳಿಯಬೇಕಾಗುತ್ತದೆ. ಇದ ಕ್ಕಾಗಿ ಬ್ರಹ್ಮಾನಂದರವರು ಯಾವದೊಂದು ಮಹೋತ್ಸವವನ್ನು ನಡಿಸ ಬೇಕೆಂದು ಯೋಚಿಸಿದರು. ಅದಕ್ಕೆ ಬಿದರಹಳ್ಳಿಯ ಭಕ್ತರು ತುಂಬಾ ಅನುಕೂಲರಾದ್ದರಿಂದ ಅಲ್ಲಿ ಹದಿಮೂರು ಕೋಟಿ ರಾಮಜಪವನ್ನು ಮಾಡಿಸಿ ದೊಡ್ಡ ಮಹೋತ್ಸವ ಮಾಡುವದು ಗೊತ್ತಾಯಿತು. ಮಹಾ ರಾಜರು ಕರ್ನಾಟಕಕ್ಕೆ ಬಂದಾಗ ತಮ್ಮಲ್ಲಿ ಶ್ರೀ ರಾಮಪ್ರತಿಷ್ಠೆ ಮಾಡ ಬೇಕೆಂದು ಎಷ್ಟೋ ಜನರು ಸಿದ್ಧತೆಯನ್ನು ನಡಿಸಿದರು.

ಸಂಕಲ್ಪಾನುಸಾರವಾಗಿ ಬಿದರಹಳ್ಳಿಯಲ್ಲಿ ಹದಿಮೂರು ಕೋಟಿ ರಾಮಜಪವು ಮುಗಿಯಿತು. ಈ ಜಪಸಾಂಗತೆಗಾಗಿ ಮಹಾರಾಜರು ಕರ್ನಾಟಕಕ್ಕೆ ದಯಮಾಡಿಸಿದರು. ಮೊದಲೇ ಜಪಯಜ್ಞದ ಮಹೋತ್ಸವ, ಅದರಲ್ಲಿ ಮಹಾರಾಜರಂಥ ಸತ್ಪುರುಷರ ಆಗಮನ, ಕೇಳುವದೇನು? ಜನರಿಗೆ ವಿಶೇಷ ಉತ್ಸಾಹ ಬಂದಿತು. ಬಿದರಹಳ್ಳಿಯ ಭಕ್ತರ ಆನಂದವಂತೂ ತೀರ ಹೆಚ್ಚಾಯಿತು.

ಈ ಉತ್ಸವಕ್ಕೆ ಅಸಂಖ್ಯ ಜನ ನರನಾರಿಯರು. ನೆರೆದರು ಪ್ರತಿನಿತ್ಯ ಬ್ರಾಹ್ಮಣಸಂತರ್ಪಣೆಯು ನಡೆಯಿತು. ಬ್ರಾಹ್ಮಣಸುವಾಸಿನಿಯರ ಸಂಖ್ಯಾಬಾಹುಲ್ಯದಿಂದ ಈ ಉತ್ಸವವು ಅಪೂರ್ವವಾಯಿತು. ಉತ್ಸವ ನಡೆದಾಗ ಬಹು ದಿವಸ ಬೇನೆ ಬಿದ್ದ ಒಬ್ಬ ಬ್ರಾಹ್ಮಣ ಸ್ತ್ರೀಯು ಪರಲೋಕವನ್ನೈದಿದಳು. ಮಹಾರಾಜರಿಗೆ ಈ ಸುದ್ದಿ ಹತ್ತಿದಾಗ ಅವರು ಊಟಕ್ಕೆ ಕೂಡ್ರುತ್ತಿದ್ದರು. ಪಂಕ್ತಿಯಲ್ಲಿ ಸಾವಿರಾರು ಜನ ಬ್ರಾಹ್ಮಣರು ಕುಳಿತಿದ್ದರು. ಎಲ್ಲರೂ ಊಟ ಬಿಟ್ಟೇಳುವ ಹೊತ್ತು ಬಂದಿತು. ಆಗ ಮಹಾರಾಜರು ಮನಸ್ಸಿನಲ್ಲಿ ಯೋಚಿಸಿ ಬ್ರಾಹ್ಮಣಸಂತರ್ಪಣೆಗೆ ಒದಗಿದ ಈ ವಿಘ್ನವನ್ನು ನಿವಾರಿಸಬೇಕೆಂದು ನಿಶ್ಚಯಿಸಿ ಬ್ರಹ್ಮಾನಂದರನ್ನು ಕರೆದು— ನೀನು ಪಂಕ್ತಿಯನ್ನು ಯಥಾಸಾಂಗವಾಗಿ ನೆರವೇರಿಸು. ಆ ಸ್ತ್ರೀಯು ಸತ್ತಿರುವದಿಲ್ಲ; ಜನರಿಗೆ ಹಾಗೆ ಭಾಸವಾಗಿರಬಹುದು. ಏನಿದ್ದದ್ದನ್ನು ನಾನು ನೋಡಿಕೊಳ್ಳುತ್ತೇನೆ ಎಂದು ಹೇಳಿ ತಾವು ಆ ಸ್ತ್ರೀಯ ಮನೆಗೆ ಹೋದರು. ಆಗ ಅಲ್ಲಿ ಆ ಸ್ತ್ರೀಯ ಆಪ್ತೇಷ್ಟರು ಶವವನ್ನು ನೆಲಕ್ಕೆ ಹಾಕಿ ಸುತ್ತಲೂ ಕುಳಿತಿದ್ದರು. ಮಹಾರಾಜರು ಒಳಕ್ಕೆ ಹೋಗಿ—ಏನು, ನಿಮಗೆ ಭ್ರಾಂತಿಯಾದಂತೆ ತೋರುತ್ತದೆ. ಈಕೆಯು ಸತ್ತಿರುವಳೇ? ಇನ್ನೂ ಜೀವವಿರುತ್ತಿರಲು ಸತ್ತಳೆಂದು ಅನ್ನುವಿರಾ? ಈಕೆಯನ್ನು ಎಬ್ಬಿಸಿ ಕೂಡ್ರಿಸಿರಿ ಎಂದು ನುಡಿದರು. ಮಹಾರಾಜರ ಮಹಿಮೆಯನ್ನು ಬಲ್ಲ ಆ ಮನೆಯ ಜನರು ಆಕೆಯನ್ನು ಎಬ್ಬಿಸಿ ಕೂಡ್ರಿಸಿದರು. ಶವವು ಹ್ಯಾಗೆ

ನೆಟ್ಟಗೆ ಕೂಡ್ರುವದು? ಇಬ್ಬರು ಮೂವರು ಗಟ್ಟಿಯಾಗಿ ಹಿಡಿದು ಕೂಡ್ರಿಸಿದರು. ಆಗ ಮಹಾರಾಜರ ಆಜ್ಞೆಯಂತೆ ಒಬ್ಬ ಶಿಷ್ಯನು ಒಂದು ತಂಬಿಗೆ ಮಜ್ಜಿಗೆ ಒಂದು ಪಾಗರೋಳಿ ಅನ್ನವನ್ನು ತಂದನು. ಮಹಾರಾಜರು ಆ ಮಜ್ಜಿಗೇ ಅನ್ನ ಕಲಿಸಿ ಒಂದು ತುತ್ತನ್ನು ಆ ಶವದ ಬಾಯಲ್ಲಿ ಹಾಕಿದರು. ಜೀವವಿಲ್ಲದ್ದರಿಂದ ಅನ್ನವು ಒಳಗೆ ಹೋಗಲಿಲ್ಲ. ಆಗ ಮಹಾರಾಜರು ತಾವೇ ಬಾಯಲ್ಲಿ ಕೈಹಾಕಿ ಗಂಟಲ ವರೆಗೆ ಅನ್ನವನ್ನು ದೂಡಿದರು. ಗಂಟಲಕ್ಕೆ ಅನ್ನದ ಸ್ಪರ್ಶವಾಗಲು ಶವಕ್ಕೆ ಜೀವದಿರುಗಿತು. ಆವಳು ಕೆಮ್ಮುತ್ತ ಕಣ್ಣು ತೆರೆದಳು. ನೆರೆದವರಿಗೆ ಆಶ್ಚರ್ಯವಾಯಿತು. ಬಳಿಕ ಆಕೆಯು ಚನ್ನಾಗಿ ಕುಳಿತುಕೊಂಡು ಮಹಾರಾಜರು ಕಲಿಸಿದ ಅನ್ನವನ್ನೆಲ್ಲ ಉಂಡಳು. ಆಕೆಯ ರೋಗವು ಹೇಳಹೆಸರಿಲ್ಲದೆ ಹೋಯಿತು. ಬಳಿಕ ಮಹಾರಾಜರು ಆಕೆಯನ್ನು ಹಾಸಿಗೆಯ ಮೇಲೆ ಮಲಗಿಸಿ ಬ್ರಾಹ್ಮಣ ಸಂತರ್ಪಣೆಯು ನಡೆದಲ್ಲಿಗೆ ಹೋದರು. ಉತ್ಸವವು ಯಥಾಸಾಂಗವಾಗಿ ನೆರವೇರಿತು. ದೊಡ್ಡವರ ಮಹಿಮೆಯು ಪಾಮರರಿಗೆ ತಿಳಿಯದು. ಎಷ್ಟು ಮಹಿಮೆಯನ್ನು ನೋಡಿದರೂ ಅಜ್ಞಾನಿಗಳಾದ ನಮ್ಮ ಮೋಹವು ಬಯಲಾಗುವದಿಲ್ಲ. ಇರಲಿ.

ಬಿದರಹಳ್ಳಿಯ ಉತ್ಸವವು ಮುಗಿದ ಬಳಿಕ ಮಹಾರಾಜರಿಗೆ ಅಗಡಿಯಲ್ಲಿ ಒಬ್ಬ ಸುಪ್ರಸಿದ್ಧ ಸಾಧುಗಳಿರುವರೆಂಬದು ಗೊತ್ತಾಯಿತು. ಸಾಧುಗಳ ದರ್ಶನಲಾಭವನ್ನು ಪಡೆಯಬೇಕೆಂದು ಮಹಾರಾಜರ ಮನಸ್ಸಿನಲ್ಲಿ ಬಂದಿತು. ಆ ಕಾಲಕ್ಕೆ ಅಗಡಿ-ಆನಂದವನದ ಶ್ರೀ ಶೇಷಾಚಲ ಸಾಧುಗಳು ಶ್ರೀ ಜಯಂತೀ ಮಹೋತ್ಸವದ ಸೇವೆಗಾಗಿ ಗಳಗನಾಥಕ್ಕೆ ಹೋಗಿದ್ದರು. ಗಳಗನಾಥಕ್ಕೂ ಬಿದರಹಳ್ಳಿಗೂ ಸಮೀಪವಿರುವದರಿಂದ ಸಾಧುಗಳು ಬಂದ ಸುದ್ದಿಯು ಮಹಾರಾಜರಿಗೆ ಹತ್ತಿತು. ಆ ಕೂಡಲೆ ಮಹಾರಾಜರು ನಿಯಮಿತ ಶಿಷ್ಯರೊಡನೆ ಹೊರಟು ಗಳಗನಾಥಕ್ಕೆ ಬಂದರು. ಗಳಗನಾಥದಲ್ಲಿಯೇ ಶ್ರೀ ಶೇಷಾಚಲ ಸದ್ಗುರುಗಳಿಗೂ ಮಹಾ

ರಾಜರಿಗೂ ಭೆಟ್ಟಿಯಾಯಿತು. ಮಹಾರಾಜರು ಸಾಧುಗಳಿಗೆ ಸಾಷ್ಟಾಂಗವಾಗಿ ಅಭಿನಂದಿಸಿ ಗಾಢಾಲಿಂಗನವನ್ನು ಕೊಟ್ಟು 'ಧನ್ಯನಾದೆನು! ಧನ್ಯನಾದೆನು!' ಎಂದು ನುಡಿದರು. ಕೇವಲ ಕಿಂಕರಭಾವದಿಂದ ನಡೆಯುವ ಶ್ರೀ ಶೇಷಾಚಲ ಸದ್ಗುರುಗಳು ಮಹಾರಾಜರನ್ನು ನಮಸ್ಕರಿಸಿ ಧನ್ಯೋದ್ಗಾರಗಳನ್ನು ತೆಗೆದರು. ಸಜ್ಜನರ ಗುರ್ತು ಸಜ್ಜನರಿಗೇ ಇರುವದಲ್ಲದೆ ಅನ್ಯರಿಗೆ ಇರಲಾರದು, ಎಂಬ ಮಾತಿನ ಅನುಭವವು ಆಗ ಬಂದು ಹೋಯಿತು. ಬಳಿಕ ಗಳಗನಾಥ ಇನಾಮುದಾರರ ಮನೆಯಲ್ಲಿ ಉಭಯ ಸಜ್ಜನರ ಪಂಗ್ತಿಲಾಭವಾಯಿತು. ಬಳಿಕ ಮಹಾರಾಜರು ಬಿದರಹಳ್ಳಿಗೆ ದಯಮಾಡಿಸಿದರು. ಇತ್ತ ಶೇಷಾಚಲ ಸದ್ಗುರುಗಳು ಸೇವೆಗಾಗಿ ಬೇರೆ ಹಳ್ಳಿಗೆ ಹೋದರು.

ಮಹಾರಾಜರು ಕರ್ನಾಟಕಕ್ಕೆ ಬಂದದ್ದು ಕೇವಲ ಅಲಭ್ಯಲಾಭವಾದ್ದರಿಂದ ಹಲವು ಜನ ಭಕ್ತರು ಅವರನ್ನು ತಮ್ಮ ತಮ್ಮ ಗ್ರಾಮಕ್ಕೆ ಕರೆದೊಯ್ದು ತಮ್ಮ ಮನೆಗಳನ್ನು ಪವಿತ್ರವಾಗ ಮಾಡಿಕೊಂಡರು. ಮಹಾರಾಜರ ಪ್ರಮುಖ ಶಿಷ್ಯರಲ್ಲಿ ಒಬ್ಬರಾದ ಮಹಾಭಾಗವತರು ಕುರ್ತಕೋಟಿಯವರೆಂದು ಹಿಂದೆ ಹೇಳಿದೆಯಷ್ಟೇ; ಆ ಮಹಾಭಾಗವತರು ಮಹಾರಾಜರನ್ನು ತಮ್ಮೂರಿಗೆ ಕರೆದೊಯ್ದು ಮಹೋತ್ಸವವನ್ನು ಮಾಡಿದರು. ಅಲ್ಲಿ ಶ್ರೀರಾಮನ ಪ್ರತಿಷ್ಠಾಪನೆಯಾಯಿತು. ಹುಬ್ಬಳ್ಳಿಯಭಕ್ತರು ಮಹಾರಾಜರನ್ನು ಕರೆದೊಯ್ದು ಅವರಿಂದ ತಮ್ಮಲ್ಲಿ ಶ್ರೀರಾಮ ಪ್ರತಿಷ್ಠೆಯನ್ನು ಮಾಡಿಸಿದರು. ಎಲ್ಲಿ ಹೋದಲ್ಲಿ ಅಪೂರ್ವಉತ್ಸವವಾಗುತ್ತಿತ್ತು. ಮಹಾರಾಜರು ಕುರ್ತಕೋಟಿಯಲ್ಲಿದ್ದಾಗಂತೂ ಜನಸಮ್ಮರ್ದವು ವಿಶೇಷವಾಗಿತ್ತು. ಜನರನ್ನು ದರ್ಶನಕ್ಕೆ ಸರತಿಯಂತೆ ಬಿಡುತ್ತಿದ್ದರು. ಎಷ್ಟೋ ಜನ ಸ್ವಯಂಸೇವಕರಿಗೆ ನುಗ್ಗುತ್ತಿರುವ ಜನರನ್ನು ತಡೆಯ್ಯ ಬೇಕಾದರೆ ಸಾಕುಸಾಕಾಗಿ ಹೋಗುತ್ತಿತ್ತು.

ಹುಬ್ಬಳ್ಳಿಯಲ್ಲಿ ಮಹಾರಾಜರಿಗೂ ಶ್ರೀ ಸಿದ್ಧಾರೂಢರಿಗೂ ಪರಸ್ಪರ ಸಂದರ್ಶನವಾಯಿತು. ದೊಡ್ಡವರ ಭೆಟ್ಟಿಯ ರಹಸ್ಯವು ಸಜ್ಜನರಾದವರಿಗೆ ತಿಳಿಯುವದಲ್ಲದೆ ಉಳಿದವರಿಗೆ ತಿಳಿಯುವದಿಲ್ಲ. ಧಾರವಾಡ ಬೆಳಗಾವ ಮೊದಲಾದ ಭಕ್ತರು ಮಹಾರಾಜರನ್ನು ತಮ್ಮಲ್ಲಿಗೆ ಕರೆದುಕೊಂಡು ಹೋಗಿ ಉತ್ಸವ ಮಾಡಿದರು. ಹೀಗೆ ಮಹಾರಾಜರು ಕರ್ನಾಟಕಕ್ಕೆ ಆಗಮಿಸಿ ಜನರಲ್ಲಿ ಅಪೂರ್ವ ಉತ್ಸಾಹವನ್ನುಂಟು ಮಾಡಿದರು; ಹಾಗು ಶ್ರೀರಾಮಭಕ್ತಿಯ ಪ್ರಸಾರವನ್ನು ಮಾಡಿದರು.

## ೨೨ನೆಯ ಅಧ್ಯಾಯ—ಅಮಾನುಷಕೃತ್ಯ.



ಸಜ್ಜನರು ಅಮಾನುಷರು ಅಂದರೆ ಮನುಷ್ಯರಲ್ಲವೆಂಬದು ಅವರ ಕೃತಿಯಿಂದಲೇ ವ್ಯಕ್ತವಾಗುವದು. ಸಜ್ಜನರು ನೋಡಲಿಕ್ಕೆ ಮನುಷ್ಯರಂತೆ ಕಂಡರೂ ಮನುಷ್ಯಸ್ವಭಾವವು ಅವರಲ್ಲಿರುವದಿಲ್ಲ. ನಾಟಕದಲ್ಲಿ ಸ್ತ್ರೀಯಾದವನು ಮಂದಿಗೆ ಸ್ತ್ರೀಯಂತೆ ಕಾಣುತ್ತಿದ್ದರೂ ತಾನು ಸ್ತ್ರೀಯಲ್ಲೆಂಬದನ್ನು ಅವನು ತಿಳಿದಿರುವನು; ಮತ್ತು ಪ್ರೇಕ್ಷಕರಾದರೂ ಅವನು ಪುರುಷನಿರುವನೆಂಬದನ್ನು ಬಲ್ಲರು. ಅದರಂತೆ ಮನುಷ್ಯತ್ವೇನ ಅವತರಿಸಿದ ಸಜ್ಜನರು ಮನುಷ್ಯರಲ್ಲವೆಂಬದನ್ನು ಜ್ಞಾನಿಗಳು ಮಾತ್ರ ತಿಳಿಯುವರು. ಹೀಗೆ ಮನುಷ್ಯರಲ್ಲದ ಸಜ್ಜನರು ಮನುಷ್ಯರ ಶಕ್ತಿಗೆ ನಿಲುಕದ ಕಾರ್ಯಗಳನ್ನು ಮಾಡಿ ತೋರಿಸುವದು ಸಹಜವಾಗಿರುವದು. ಸತ್ತ ಶವನ್ನು ಬದುಕಿಸುವದು, ಬಂಜೆ ಸ್ತ್ರೀಯರಿಗೆ ಮಕ್ಕಳನ್ನು ಕೊಡುವದು, ಅಸಾಧ್ಯ ರೋಗವನ್ನು ನಿವಾರಿಸುವದು ಮನುಷ್ಯರ ಕೈಯಿಂದಾಗದು. ಇಂಥ ಕೆಲಸಗಳನ್ನು ಸಜ್ಜನರು ಲೀಲಾಮಾತ್ರವಾಗಿ ಮಾಡುವರು. ಸಜ್ಜನರಿಗೆ ಇಂಥ ಅಮಾನುಷ ಕೃತ್ಯಗಳನ್ನು ತೋರಿಸಿ ಜನರನ್ನು ದಂಗುಬಡಿಸಬೇಕೆಂದು ಹಂಬಲವಿರುವದಿಲ್ಲ. ಪ್ರತಿಷ್ಠೆ ಗಳಿಸಬೇಕೆಂಬ

ಇಚ್ಛೆಯೂ ಇರುವದಿಲ್ಲ; ಆದರೆ ಅವರು ಇಂಥ ಅಮಾನುಷ ಕೃತ್ಯಗಳನ್ನು ಕೇವಲ ಭಕ್ತೋದ್ಧಾರಾರ್ಥವಾಗಿ ಮಾಡುವರು. ನಿಜವಾದ ಭಕ್ತರಿಗೆ ತಮ್ಮ ಗುರುತು ಸಿಗಬೇಕೆಂದೇ ಅವರು ಹೀಗೆ ತಮ್ಮ ಸಾಮರ್ಥ್ಯವನ್ನು ಪ್ರಕಟ ಮಾಡುವರು. ಹಾವುಗಾರನು ಡೊಳ್ಳು ಹೊಡೆದರೆ ಜನರು ಕೂಡುವರು. ಇಂಥಲ್ಲಿ ಏನೋ ಆಟವು ನಡೆದಿದೆ ಎಂಬದು ಜನರಿಗೆ ಗೊತ್ತಾಗುವದು. ಅದರಂತೆ ಸಜ್ಜನರು ತಮ್ಮ ಸಾಮರ್ಥ್ಯವನ್ನು ಪ್ರಕಟ ಮಾಡಿದರೆ ಅಜ್ಞಾನಿಗಳು ಗಡಬಡಿಸಿ ಅವರ ಸುತ್ತಮುತ್ತು ನೆರೆಯುವರು. ಜನರಲ್ಲಿ ಸಜ್ಜನರ ಪ್ರಶಂಶೆ ನಡೆದ ಕೂಡಲೆ ದೂರದಲ್ಲಿದ್ದ ಭಕ್ತನಿಗೆ ವಿಚಾರ ಹುಟ್ಟಿ ಅವನು ಸಜ್ಜನರ ಸನ್ನಿಧಿಯನ್ನು ಸೇರುವನು. ಹೊಸ ಜನರು ಭಕ್ತರಾಗಿ ಉದಾರದ ಮಾರ್ಗವನ್ನು ತಿಳಿದುಕೊಳ್ಳುವರು. ಜನರ ವಿಶ್ವಾಸವು ಕೂಡುವದಕ್ಕೋಸ್ಕರವಾಗಿಯೇ ಸಜ್ಜನರು ಹೀಗೆ ಅಮಾನುಷ ಕೃತ್ಯ ಮಾಡುವರಲ್ಲದೆ ಬೇರೆ ಉದ್ದೇಶದಿಂದ ಮಾಡರು.

ಸಜ್ಜನರ ಈ ಸ್ವಭಾವದಂತೆ ಸಜ್ಜನರಾದ ಮಹಾರಾಜರು ತಮ್ಮ ಅವತಾರ ಕಾಲದಲ್ಲಿ ಹಲವು ಅಮಾನುಷ ಕೃತ್ಯಗಳನ್ನು ಮಾಡಿ ತೋರಿಸಿದರು. ಅವೆಲ್ಲ ಲೀಲೆಗಳನ್ನು ಸಾದ್ಯಂತವಾಗಿ ಬರೆದು ತಿಳಿಸಬೇಕೆಂದರೆ ಇಂಥ ನೂರಾರು ಗ್ರಂಥಗಳಾದರೂ ಸಾಲವು. ಮೇಲಾಗಿ ಅಜ್ಞಾನಿಗಳಾದ ನಮಗೆ ಜ್ಞಾನಿಗಳ ಸಮಗ್ರ ಲೀಲೆಯು ತಿಳಿಯುವದು ದೂರತೋಪಾಸ್ತವೇ ಸರಿ. ಸಜ್ಜನರ ಅವತಾರ ಕಾಲದಲ್ಲಿಯಾಗಲಿ, ಅವರ ತರುವಾಯದಲ್ಲಿಯಾಗಲಿ ಜನರು ಬರಿಯ ಅವರ ಅಮಾನುಷ ಕೃತ್ಯಗಳನ್ನಷ್ಟು ಕೇಳಿ ತೃಪ್ತರಾಗಲಾರರು. ಅಮಾನುಷ ಕೃತ್ಯಗಳು ಗೌಣವಿದ್ದು, ಸದ್ಬೋಧವು ಪ್ರಾಮುಖ್ಯವಿರುತ್ತದೆ. ಹಾವಾಡಿಗರ ಆಟದಲ್ಲಿ ಅವರು ಬಾರಿಸುವ ಡೊಳ್ಳಿಗೆ ಮಹತ್ವವಿರದೆ ಅವರು ತೋರಿಸುವ ಆಟಕ್ಕೆ ಹ್ಯಾಗೆ ಮಹತ್ವವಿದೆಯೋ ಹಾಗೆ ಸಜ್ಜನರು ಅವತರಿಸಿದಾಗ ಅವರ ಅಮಾನುಷ

ಕೃತ್ಯಕ್ಕೆ ಡೊಳ್ಳಿನಂತೆ ಮಹತ್ವವು ಇರದೆ ಅವರು ತೋರಿಸುವ ಭಗವದುಪಾಸನೆಗೇ ಮಹತ್ವವಿರುತ್ತದೆ. ವಿಚಾರವಂತರು ಸಜ್ಜನರು ತೋರಿಸಿದ ಭಗವದುಪಾಸನೆಯ ಮರ್ಮವನ್ನು ತಿಳಿದು ಅದರಂತೆ ನಡೆದು ಜನ್ಮ ಸಾರ್ಥಕ್ಯವನ್ನು ಮಾಡಿಕೊಳ್ಳಬೇಕು. ಆದ್ದರಿಂದ ಪ್ರಸ್ತುತದ ಚರಿತ್ರ ನಾಯಕರಾದ ಶ್ರೀ ಬ್ರಹ್ಮಚೈತನ್ಯ ಮಹಾರಾಜರು ಯಾವ ರಾಮನ ಉಪಾಸನೆಯನ್ನು ಜಗತ್ತಿಗೆ ತೋರಿಸಿಕೊಟ್ಟರೋ ಮತ್ತು ರಾಮನನ್ನು ಒಲಿಸಿಕೊಳ್ಳಬೇಕಾದರೆ ಯಾವ ಬಗೆಯ ಆಚರಣೆ ಬೇಕೆಂಬದನ್ನು ತಿಳಿಸಿರುವರೋ ಆ ಬಗೆಯ ವರ್ತನವನ್ನಿಟ್ಟು ಆ ಶ್ರೀ ರಾಮನ ಒಲುಮೆಯನ್ನು ಸಂಪಾದಿಸಬೇಕು. ಮಹಾರಾಜರ ಅಮಾನುಷ ಕೃತ್ಯಗಳಿಂದ ಅವರನ್ನು ದೇವರೆಂದು ತಿಳಿದ ಭಕ್ತರು ಈ ಧರ್ಮವನ್ನು ಪಾಲಿಸಿದರೇ ಅವರು ಹಾಗೆ ತಿಳಿದದ್ದು ಸಾರ್ಥಕವಾಗುವದು; ಮತ್ತು ದೊಡ್ಡವರ ಈ ಸನ್ಮಾರ್ಗವನ್ನು ತಿಳಿದು ನಡೆಯುವದೇ ಅಜ್ಞಾನಿಗಳಾದ ನಮಗೆ ತಾರಕವಿರುತ್ತದೆ. ಇರಲಿ.

ಮಹಾರಾಜರು ಭಕ್ತರಿಗೆ ಗುರತು ಕೊಡುವದಕ್ಕಾಗಿ ಕೆಲವರಿಗೆ ಸ್ವಪ್ನದಲ್ಲಿ ದರ್ಶನವನ್ನಿತ್ತರು. ಕೆಲವರ ಮಹಾರೋಗ-ಕುಷ್ಟರೋಗಗಳನ್ನು ನಿವಾರಿಸಿದರು. ಎಷ್ಟೋ ಜನರಿಗೆ ಪ್ರಾಣದಾನ ಮಾಡಿದರು. ಹಲವರಿಗೆ ತಮ್ಮ ಸ್ವರೂಪದರ್ಶನವನ್ನು ಮಾಡಿಸಿದರು. ಕೆಲವರಿಗೆ ಒಡಕ ನಾವನ್ನು ನೀರಲ್ಲಿ ತೇಲಿಸಿ ತೋರಿಸಿದರು. ಕೆಲವರ ಪ್ರಾರಬ್ಧಭೋಗವನ್ನು ನಿವಾರಣೆ ಮಾಡಿದರು. ಕೆಲವರಿಗೆ ಅನ್ನವೃದ್ಧಿಯನ್ನು ಮಾಡಿ ತೋರಿಸಿದರು. ಕೆಲವರಿಗೆ ಬಂದ ಸಂಕಟಗಳನ್ನು ತಾವೇ ಅನುಭವಿಸಿ ಭಕ್ತರನ್ನು ಸಂಕಟದಿಂದ ಮುಕ್ತರನ್ನಾಗ ಮಾಡಿದರು. ಹೀಗೆ ಹಲವರಿಗೆ ಹಲವು ಬಗೆಯ ಚಮತ್ಕಾರಗಳನ್ನು ತೋರಿಸಿ ಅವರಲ್ಲಿ ಭಕ್ತಿ-ಭಾವನೆಗಳನ್ನು ಹುಟ್ಟಿಸಿದರು. ಈ ಅದ್ಭುತ ಲೀಲೆಗಳನ್ನು ನೋಡಿದ ಎಷ್ಟೋ ಜನ ಪುಣ್ಯಶಾಲಿಗಳು ಮಹಾರಾಜರಲ್ಲಿ ವಿಶ್ವಾಸವನ್ನು ತಾಳಿ

ಇಹಪರ ಸೌಖ್ಯಗಳನ್ನು ಹೊಂದಿದರು. ಸಜ್ಜನರ ಈ ಅಮಾನುಷ ಕೃತ್ಯಗಳೇ ಜನರಲ್ಲುಂಟಾಗುವ ಸಂಶಯಗಳನ್ನು ಛೇದಿಸುತ್ತವೆ; ಮನುಷ್ಯರಿಗೂ ಅವರಿಗೂ ಇರುವ ಭೇದವನ್ನು ವ್ಯಕ್ತಗೊಳಿಸುತ್ತವೆ. ನಿಜವಾದ ಸಜ್ಜನರು ಅಮಾನುಷಕೃತ್ಯಗಳನ್ನು ಮಾಡಿದರೂ ಅವುಗಳ ಬಗ್ಗೆ ಅಭಿಮಾನಗ್ರಸ್ತರಾಗುವದಿಲ್ಲ; ಮತ್ತು ಬುದ್ಧಿಪೂರ್ವಕವಾಗಿ ಯಾವ ಅಮಾನುಷ ಲೀಲೆಗಳನ್ನೂ ತೋರಿಸ ಹೋಗುವದಿಲ್ಲ. ಅವರಲ್ಲಿ ದಂಭವಾಗಲಿ, ಪೌರುಷವಾಗಲಿ, ಹೋಗಳಿಕೊಳ್ಳುವ ಗುಣವಾಗಲಿ ಇರುವದಿಲ್ಲ. ಇದೇ ಸಜ್ಜನರ ಹೆಗ್ಗುರತು. ಜನರು ಇದನ್ನು ವಿಚಾರಿಸಿ ನಿಜವಾದ ಸಜ್ಜನರನ್ನು ಗುರ್ತಿಸಬೇಕು. ನಿಜವಾದ ಸಜ್ಜನರಲ್ಲದ ಕೆಲಜನರು ಅಲ್ಪ ತಪಸ್ಸಿನಿಂದ ಯಾವದೊಂದು ಸಿದ್ಧಿಯನ್ನು ವಶಮಾಡಿಕೊಂಡು ಆ ಸಿದ್ಧಿಯ ಬಲದಿಂದ ಇಂಥ ಸಣ್ಣಪುಟ್ಟ ಅಮಾನುಷ ಕೃತ್ಯಗಳನ್ನು ಮಾಡಿ ತೋರಿಸಿ ಜನರಲ್ಲಿ ದೊಡ್ಡವರೆನಿಸಿಕೊಳ್ಳುವರು. ಆದರೆ ಅವರು ಲೋಕೋದ್ಧಾರಕ ಸಜ್ಜನರಾಗಿ ಜನರನ್ನುದ್ಧರಿಸುವ ಶಕ್ತಿಯು ಅವರಲ್ಲಿಗಲಾರದು. ಆದರೂ ಸಾಮಾನ್ಯರಿಗೆ ಇಂಥವರನ್ನು ಪರೀಕ್ಷಿಸುವದಕ್ಕೆ ಶಕ್ತಿಸಾಲದು. ಅಂತೇ ಎಷ್ಟೋ ಜನರು ಮೋಸ ಹೋಗುವರು. ಜನರನ್ನು ಪುನೀತರನ್ನಾಗ ಮಾಡುವ ಶಕ್ತಿಯು ನಿಜವಾದ ಸತ್ಪುರುಷರಲ್ಲಿರುತ್ತದೆ, ಅನ್ಯರಲ್ಲಿರಲಾರದು.

ಸತ್ಪುರುಷರಿಗೆ ವೈರಿಗಳಂತೆ ನಿಂದಕರು ಬೆನ್ನಹತ್ತಿರುತ್ತಾರೆಂಬ ಅಂಶವನ್ನು ಹಿಂದೆ ಒಂದು ಅಧ್ಯಾಯದಲ್ಲಿ ಹೇಳಿರುತ್ತದಷ್ಟೇ; ಆ ನಿಂದಕರಿಗೆ ಸಜ್ಜನರ ಎಷ್ಟು ಅಮಾನುಷ ಕೃತಿಗಳನ್ನು ನೋಡಿದರೂ ಎಷ್ಟು ಸಂಗತಿಗಳನ್ನು ಅನುಭವಕ್ಕೆ ತಂದುಕೊಂಡರೂ ಸದ್ಬುದ್ಧಿಯುದಯಿಸುವದಿಲ್ಲ. ಇಂಥ ಅಮಾನುಷ ಕೃತ್ಯಗಳನ್ನು ಹಳಿಯುತ್ತಲೇ ಅವರು ಕಾಲಹರಣಮಾಡುವರು; ಮತ್ತು ಇಂಥ ಲೀಲೆಗಳಿಗೆ ಒಂದಿಲ್ಲೊಂದು ಪ್ರಕಾರದಿಂದ ದೂಷಣೀಯ ಹೆಸರನ್ನಿಟ್ಟು ತಮ್ಮ ದೌರ್ಜನ್ಯಕ್ಕೆ ಕಳಸವನ್ನಿಡುವರು. ವಿವೇಕಿಗಳಾದವರು ಇಂಥ ನಿಂದಕರ ಬಳಿಗೆ ಭೀಳಬಾರದು.

ಮತ್ತು ಇಂಥ ನಿಂದಕರ ಮಾತು ಕೇಳಿ ನಿಜವಾದ ಸತ್ಪುರುಷರ ವಿಷಯವಾಗಿ ಅಶ್ರದ್ಧೆಯನ್ನು ತಾಳಬಾರದು. ನಿಜವಾದ ಭಕ್ತರು ಇಂಥ ನಿಂದಕರ ಮುಖಭಂಗವನ್ನು ಮಾಡುವರು. ಬರಿಯ ಒಣವಾದದಿಂದ ನಿಂದಕರ ಮುಖಭಂಗವಾಗುವದಿಲ್ಲ. ಪ್ರತ್ಯಕ್ಷ ಅವರ ಮೈಮೇಲೆಯೇ ಕಠಿಣ ಪ್ರಸಂಗವನ್ನು ತಂದು ಅವರನ್ನು ದೊಡ್ಡವರ ಕೃಪೆಯಿಂದ ವಾದಮಾಡಿ ಹಣ್ಣುಮಾಡುವರು. ಇದು ಸತ್ವಸ್ಥರಾದ ಭಕ್ತರ ಮಾತು. ಸಾಮಾನ್ಯಭಕ್ತರು ನಿಂದಕರ ನೆರಳಿಗೆ ಕೂಡ ನಿಲ್ಲಬಾರದು. ಗುರುನಿಂದೆಯನ್ನು ಕೇಳುವದು ಮಹಾ ಪಾತಕವಿರುತ್ತದೆ. ಸಜ್ಜನರು ತಮ್ಮ ಭಕ್ತರಷ್ಟೇ ಇಂಥ ಸಂಶಯಕ್ಕೆ ಒಳಗಾಗಬಾರದೆಂದು ಲಕ್ಷ್ಕೊಡುವರಲ್ಲದೆ ಅನ್ಯರ ಸಂಶಯಗಳನ್ನು ಲಕ್ಷಿಸುವದಿಲ್ಲ. ಯಾಕಂದರೆ ಸದ್ಭಕ್ತರನ್ನೇ ಉದ್ಧರಿಸುವದು ಅವರ ಕರ್ತವ್ಯವಿದ್ದು ಅವರಿಗೇ ಸಜ್ಜನರು ತಮ್ಮ ಗುಟ್ಟನ್ನು ಹೇಳುವರು; ಅಂತೇ ಅವರು ಭಕ್ತರ ಸಂಶಯಗಳನ್ನು ಛೇದಿಸುವರು. ಇದಕ್ಕೆ ಶ್ರೀಸಮರ್ಥರಾಮದಾಸರ ಕಾಲದಲ್ಲಿಯ ಒಂದು ಉದಾಹರಣೆಯನ್ನು ಇಲ್ಲಿ ಹೇಳುವೆವು.

ಸಮರ್ಥರಾಮದಾಸರು ಜಗದ್ವಿಖ್ಯಾತ ಸತ್ಪುರುಷರೆಂಬದು ಸರ್ವಶ್ರುತವಷ್ಟೇ; ಅವರು ಗುಪ್ತರಾಗಿ ಮುನ್ನೂರು ವರುಷಗಳು ಗತಿಸಿ ಹೋಗಿದ್ದರೂ ಅವರ ಯಶಃಕಾಯವು ಇದುವರೆಗೂ ಸ್ಥಿರವಾಗಿಯೇ ಇರುತ್ತದೆ. ಅವರ ಹೆಸರು ತಕ್ಕೊಂಡರೆ ಎಂಥವನಿಗಾದರೂ ಭಕ್ತಿಯುತ್ಪನ್ನವಾಗುತ್ತದೆ. ಅವರು ಬರೆದ ದಾಸಬೋಧವನ್ನಂತೂ ಜನರು ಪ್ರತಿನಿತ್ಯ ಪಾರಾಯಣ ಮಾಡುವರು. ಇಂಥ ರಾಷ್ಟ್ರೀಯ ವಿಭೂತಿಯು ಪ್ರತ್ಯಕ್ಷ ಇರುವಾಗ ಅವರ ವಿಷಯಕ್ಕೆ ಜನರಲ್ಲಿ ಎಷ್ಟು ಶ್ರದ್ಧೆಯಿರಬಹುದೆಂಬದನ್ನು ಬರೆದು ತೋರಿಸುವ ಕಾರಣವಿಲ್ಲ. ಇಂಥ ಲೋಕೋತ್ತರ ಸತ್ಪುರುಷರ ವಿಷಯವಾಗಿಯೂ ನಿಂದಕರು ಕುಬುದ್ಧಿಯನ್ನು ತಾಳದೆ ಇರುತ್ತಿರಲಿಲ್ಲ. ಎಷ್ಟು ಜನರು ಕುಬುದ್ಧಿಯನ್ನು ತಾಳಿದರೂ ಸಮ

ರ್ಥರು ತಮ್ಮ ಶಕ್ತಿಪ್ರಭಾವದಿಂದ ಆ ನಿಂದಕರ ಮುಖಭಂಗಮಾಡುತ್ತಲೇ ಇದ್ದರು. ನಿಂದಕರೇ ಸತ್ಪುರುಷರ ನಿಜವಾದ ಸ್ವರೂಪವನ್ನು ಬೈಲಿಗಿಡುವವರಾದ್ದರಿಂದ ಹೊಸ ಹೊಸ ನಿಂದಕರು ಸಜ್ಜನರಿಗೆ ಗಂಟು ಬಿದ್ದೇ ಬೀಳುವರು. ಸಮರ್ಥರ ಮಠದಲ್ಲಿಯೇ ಒಬ್ಬ ನಿಂದಕನಿದ್ದನು. ಅವನು ಸಮರ್ಥರ ಸಾಮರ್ಥ್ಯದ ಕಡೆಗೆ ಲಕ್ಷ್ಯಗೊಡದೆ ಸರ್ವದಾ ಅವರ ತಪ್ಪುಗಳನ್ನು ಹುಡುಕುವದರಲ್ಲಿಯೇ ತೊಡಗಿರುತ್ತಿದ್ದನು. ಆದರೆ ಆ ದಿವ್ಯ ಸಜ್ಜನರಲ್ಲಿ ಆತನಿಗೆ ತಪ್ಪು ಏನು ಸಿಗಬೇಕು? ಆಗ ಆತನು ದುಷ್ಟ ಕಲ್ಪನೆಗಳನ್ನು ಮಾಡಹತ್ತಿದನು. ಸಮರ್ಥರ ಬಳಿಯಲ್ಲಿ ಅಕ್ಕ ಹಾಗು ವೇಣೂಬಾಯಿ ಎಂಬ ಇಬ್ಬರು ಸ್ತ್ರೀಯರು ಸೇವೆಮಾಡಿಕೊಂಡಿದ್ದರು.ಸಮರ್ಥರ ಸೇವೆಯಿಂದ ಆ ಸ್ತ್ರೀಯರು ತ್ರಿಭುವನದಲ್ಲಿ ಪೂಜ್ಯರಾದರು. ಇಂಥ ಆ ಮಹನೀಯರ ವಿಷಯದಲ್ಲಿ ಆ ನಿಂದಕನಿಗೆ ಸಂಶಯ ಬಂದಿತು. 'ಸಮರ್ಥರು ಏಕಾಂತದಲ್ಲಿ ಆ ಸ್ತ್ರೀಯರೊಡನೆ ಸೇವೆ ಪರಿಗ್ರಹಿಸುವರಾದ್ದರಿಂದ ಇವರಲ್ಲಿ ಪಾಪಸಂಬಂಧವಿರಬೇಕು' ಎಂದು ಕಲ್ಪಿಸಲಿಕ್ಕೆ ಆತನು ಹಿಂದು ಮುಂದು ನೋಡಲಿಲ್ಲ. ಇಂಥ ಕಲ್ಪನೆಗಳು ಮನಸ್ಸಿನಲ್ಲಿ ಒರಲು ಅವನು ನಾಚಿಕೊಳ್ಳದೆ ಹಿಗ್ಗಿ ಈ ವಿಷಯವನ್ನು ಶಿವಾಜಿಮಹಾರಾಜರಿಗೆ ಗುಪ್ತವಾಗಿ ತಿಳಿಸಿದನು. ಶಿವಾಜಿಮಹಾರಾಜನೆಂದರೆ ಸಮರ್ಥರ ಪಟ್ಟಶಿಷ್ಯನು. ಅವನಲ್ಲಿ ಅದ್ವಿತೀಯವಾದ ವಿಶ್ವಾಸಪತ್ತು. ಅವರ ಕೃಪೆಯಿಂದಲೇ ಅವನು ಮಹಾರಾಜನಾಗಿದ್ದನು. ಇಂಥವನಿಗೆ ಸಮರ್ಥರ ಯೋಗ್ಯತೆಯು ತಿಳಿಯದೆ ಇರುವದೇ? ಅವನು ಸಮರ್ಥರನ್ನು ಚನ್ನಾಗಿ ಬಲ್ಲವನಾದರೂ ನಿಂದಕನ ಮುಖಭಂಗಾರ್ಥವಾಗಿ ಅವನು ಕರದಲ್ಲಿಗೆಹೋದನು.

ಆಗ ನಿಂಧಕನು 'ಸಮರ್ಥರು ಈ ಕೋಣೆಯಲ್ಲಿ ಮಲಗಿದ್ದು, ಅಕ್ಕ ಹಾಗು ವೇಣೂಬಾಯಿ ಇವರಿಬ್ಬರು ಅವರ ಪಾದಸೇವೆ ಮಾಡುತ್ತಿರುವರೆ'ಂದು ಹೇಳಿದನು. ಶಿವಾಜಿಯು ಆ ಕೂಡಲೆ ತನ್ನ ಕೈಖಡ್ಗದಿಂದ ಕದಕ್ಕೆ ತಿವಿದನು. ಖಡ್ಗದ ಪೆಟ್ಟಿನಿಂದ ಕದಕ್ಕೆ ಖಿಂಡಿಯು ಬಿದ್ದಿತು.

ಶಿವಾಜಿಯು ಹಣಿಕಿ ನೋಡಲು ಪಲ್ಲಂಗದ ಮೇಲೆ ಮಾರುತಿಯು ಮಲಗಿದಂತೆಯೂ, ಎರಡು ಕಪಿಗಳು ಸೇವೆ ಮಾಡುತ್ತಿರುವಂತೆಯೂ ತೋರಿತು. ಶಿವಾಜಿಯ ಮೈಕೂದಲುಗಳು ನೆಟ್ಟಗಾದವು. ಈಗ ಆತನು ಆ ನಿಂದಕನ ಮೇಲೆ ಬೆಂಕಿಯನ್ನು ಕಾರುತ್ತ ಅವನ ರಟ್ಟೆಯನ್ನು ಹಿಡಿದೆಳೆದು ಆ ಕಿಂಡಿಯಲ್ಲಿ ನೋಡೆಂದು ಹೇಳಿದನು. ಶಿವಾಜಿಗೆ ಮಾರುತಿಯು ದರ್ಶನವಾದಂತೆ ಆ ನಿಂದಕನಿಗೆ ಹ್ಯಾಗೆ ಆಗಬೇಕು? ಅವನು ಸಮರ್ಥರ ದೇಹವನ್ನೂ ವೇಣೂಬಾಯಿ ಅಕ್ಕಾಬಾಯಿಯರನ್ನೂ ನೋಡಿದನು. ಶಿವಾಜಿಯು ನಿಂದಕನನ್ನು ಬೈಯತೊಡಗಿದನು. ನಿಂದಕನು ತನ್ನ ಮಾತೇ ಸತ್ಯವೆಂದು ನುಡಿದನು. ಹೀಗೆ ಹೊರಗೆ ಗದ್ದಲವಾಗಲು ಸಮರ್ಥರು 'ಯಾರು ಶಿವಾಜೀ?' ಎಂದು ಕೂಗಿದರು. ಶಿವಾಜಿಯು ನಮ್ರಭಾವದಿಂದ ಉತ್ತರ ಕೊಟ್ಟನು. ಆಗ ಸಮರ್ಥರು ಕೋಣೆಯ ಬಾಗಿಲ ತೆರೆದು ಏನು ವಾಗ್ವಾದವೆಂದು ಕೇಳಿದರು. ಶಿವಾಜಿಯು ನಿಂದಕನ ಕುತ್ಸಿತತನವನ್ನು ಬೈಲಿಗಿಡಲಿಲ್ಲ. ಶಿವಾಜಿಯು ಹೇಳದಿದ್ದರೂ ಸರ್ವಜ್ಞರಾದ ಸಮರ್ಥರು 'ಹೀಗೇ ಈತನಿಗೆ ಸಂಶಯವು ಬಂದಿತೋ?' ಎಂದು ತಮ್ಮ ಸ್ವರೂಪವನ್ನು ಪ್ರಕಟಮಾಡಿದರು. ನಿಂದಕನು ಆ ರೂಪವನ್ನು ನೋಡಲಾರದೆ ಕಣ್ಣುಮುಚ್ಚಿಕೊಂಡನು. ಶಿವಾಜಿಯು ಧನ್ಯನಾದೆನು ಎಂದು ನುಡಿದನು. ಆಗ ಆ ನಿಂದಕನು ಸಮರ್ಥರಲ್ಲಿ ಪೂಜ್ಯಬುದ್ಧಿಯನ್ನು ತಾಳಿ, ಸಮರ್ಥರು ಮನುಷ್ಯರಲ್ಲ; ವೇಣೂಬಾಯಿ-ಅಕ್ಕಾಬಾಯಿ ಇವರು ಸ್ತ್ರೀಯರಲ್ಲ; ಭೂಲೋಕದಲ್ಲಿ ಅವತರಿಸಿ ಬಂದ ಮಾನುಷ ವೇಷಧಾರಿಗಳು, ಎಂದು ತಿಳಿದನು. ಕೊನೆಗೆ ಅವನು ಸಮರ್ಥರ ಸೇವೆಯಿಂದ ಸದ್ಗತಿ ಹೊಂದಿದನು. ಸಮರ್ಥರು ಮಲಗುವ ಕೋಣೆಯೂ, ಶಿವಾಜಿಯು ಕದಕ್ಕೆ ಮಾಡಿದ ಖಿಂಡಿಯೂ ಅದ್ಯಾಪೀ ಸಜ್ಜನಗಡದಲ್ಲಿ ಸಿಗುವವು. ಇರಲಿ. ಸಮರ್ಥರು ಶಿವಾಜಿಯನ್ನು ಕುರಿತು—ಶಿವಬಾ, ಆ ನಿಂದಕನು ನಿನಗೆ ಹೀಗೆ ಹೇಳದಿದ್ದರೆ ನಿನಗೆ ಮಾರುತಿಯ ದರ್ಶನವು

ಹ್ಯಾಗಾಗುತ್ತಿತ್ತು? ಸದ್ಭಕ್ತರಿಗಿಂತಲೂ ನಿಂದಕರೇ ಸಜ್ಜನರನ್ನು ಪ್ರಸಿದ್ಧಿಗೆ ತರತಕ್ಕವರೆಂದು ತಿಳಿ. ಯಾಕಂದರೆ ಅವರ ಸಲುವಾಗಿಯೇ ಸಜ್ಜನರು ಅಮಾನುಷತನವನ್ನು ವ್ಯಕ್ತಗೊಳಿಸಬೇಕಾಗುತ್ತದೆ, ಎಂದು ನುಡಿದರು. ಶಿವಾಜಿಯು ಸಮರ್ಥರ ಕಾಲ್ಗೆರಗಿ ತನ್ನ ರಾಜಧಾನಿಗೆ ಹೊರಟು ಹೋದನು.

ಹೇಳತಕ್ಕ ಮುಖ್ಯಾಂಶವೇನಂದರೆ—ಸಜ್ಜನರು ತಾವಾಗಿಯೇ ಯಾವ ಅಮಾನುಷ ಕೃತ್ಯಗಳನ್ನು ಮಾಡಲಿಕ್ಕೆ ಬಯಸುವದಿಲ್ಲ. ಸದ್‌ಭಕ್ತರಲ್ಲಿಯ ವಿಶ್ವಾಸವು ಜಾಗ್ರತವಾಗಿರುವದಕ್ಕೂ ನಿಂದಕರ ಮುಖಭಂಗವಾಗಿ ಯೋಗವು ಅನುಕೂಲಿಸಿ ಬಂದಿದ್ದರೆ ಅವರ ಉದ್ಧಾರವಾಗುವದಕ್ಕೂ ಪ್ರಸಂಗಾನುಸಾರ ತಮ್ಮ ದಿವ್ಯ ಪ್ರಭಾವವನ್ನು ಜಗತ್ತಿಗೆ ತೋರಿಸುವರು. ಇದರಂತೆ ಮಹಾರಾಜರಾದರೂ ಭಕ್ತರ ಭಕ್ತಿಪೋಷಕವಾದ ಹಲವು ಅಮಾನುಷ ಕೃತ್ಯಗಳನ್ನು ತೋರಿಸಿದರು. ಅವರ ಈ ಅಮಾನುಷ ಕೃತ್ಯಗಳ ಉದ್ದೇಶವು ಜನರು ಆಸ್ತಿಕರೂ ಸನ್ಮಾರ್ಗರತರೂ ಆಗಬೇಕೆಂದು ಇರುವದರಿಂದ ಜನರು ಈ ಮರ್ಮವನ್ನರಿತು ನಡೆಯುವದು ತುಂಬಾ ಶ್ರೇಯಸ್ಕರವಾಗಿರುತ್ತದೆ.

## ೨೩ ನೆಯ ಅಧ್ಯಾಯ—ಸದ್ಬೋಧ.

ಮಹಾರಾಜರು ಪ್ರತಿನಿತ್ಯ ತಮ್ಮ ಬಳಿಗೆ ಬರುವ ನೂತನ ಭಕ್ತರಿಗೂ, ತಮ್ಮ ಬಳಿಯಲ್ಲಿಯೇ ನಿಂತು ಸೇವೆ ಮಾಡುತ್ತಿರುವ ಭಕ್ತರಿಗೂ ಯಾವಾಗಲೂ ಸದ್ಬೋಧ ಮಾಡುತ್ತಿದ್ದರು ಅವರ ಪ್ರಬೋಧಶಕ್ತಿಯು ಅವರ್ಣನೀಯವಾಗಿತ್ತು. ಮುಖ್ಯವಾಗಿ ಅವರು ಶ್ರೀರಾಮನಾಮಧ್ಯಾನವೇ ಸಂಸಾರ ತರಣೋಪಾಯವೆಂದು ಹೇಳುತ್ತಿದ್ದರು. ಅವರ ಉಪದೇಶದ ಮುಖ್ಯಸಾರವು ಇದೇ; ಈ ವಿಷಯವು ಜನರ ಮನಸ್ಸಿನ ಮೇಲೆ ಪರಿಣಾಮಕರವಾಗಿ ಬಿಂಬಿಸುವಂತೆ ಹಲವು ಉದಾಹರಣೆಗಳನ್ನು ಕೊಟ್ಟು

ಸಮರ್ಥಿಸುತ್ತಿದ್ದರು. ವೇದಾಂತಶಾಸ್ತ್ರವನ್ನೋದಿ ಪರಮಾತ್ಮನನ್ನು ತಿಳಿಯುತ್ತೇನೆನ್ನುವದು ದಡ್ಡತನವು; ಹೀಗೆ ದಡ್ಡರಂತೆ ಆಚರಿಸುವದಕ್ಕಿಂತ ರಾಜಮಾರ್ಗದಂತಿರುವ ರಾಮನಾಮುವನ್ನು ಭಜಿಸುವದು ಜಾಣತನದ ಕೆಲಸವು; ಇದರಿಂದ ಪರಮಾತ್ಮನನ್ನು ಸಹಜವಾಗಿ ಪಡೆಯಬಹುದು, ಎಂದು ಹೇಳುತ್ತಿದ್ದರು.

ಮಹಾರಾಜರ ಬಳಿಯಲ್ಲಿ ವಿಷ್ಣುಪಂತನೆಂಬೊಬ್ಬ ಭಕ್ತನಿದ್ದನು. ಆತನು ಪ್ರತಿನಿತ್ಯ ಸ್ನಾನ ಮಾಡುವಾಗ್ಗೆ ವಿಷ್ಣುಸಹಸ್ರನಾಮುವನ್ನು ಪಠಣ ಮಾಡುತ್ತಿದ್ದನು. ಈ ನೇಮುವನ್ನು ಅವನು ಏನಾದರೂ ತಪ್ಪುತ್ತಿದ್ದಿಲ್ಲ. ಇದರಂತೆ ಅವನು ೩೫ ವರುಷಗಳ ವರೆಗೆ ಆಚರಿಸಿದನು. ಮಹಾರಾಜರ ಬಳಿಯಲ್ಲಿದ್ದಾಗ ಅವನ ದೇಹಾವಸಾನ ಕಾಲವು ಬಂದಿತು. ದೇಹದಿಂದ ಅವನ ಪ್ರಾಣವೂ ಹೊರಟು ಹೋಯಿತು. ಆಗ ಮಹಾರಾಜರು ಆತನಿಗೆ ತುರಾಯಾಶ್ರಮುವನ್ನು ಕೊಡಿಸಿದರು. ಹೆಣಕ್ಕೆ ಆಶ್ರಮ ಕೊಡಿಸಿದರೆಂದು ಅಭಕ್ತರು ನಕ್ಕರು. ಆದರೆ ವರ್ಷಾವಧಿ ಮುಗಿದ ಮೇಲೆ ಅವನಿಗೆ ಸ್ನಾನಕ್ಕೆ ಹಾಕಲು ತಲೆಯ ಮೇಲೆ ನೀರು ಬಿದ್ದಕೂಡಲೆ ಶವವು ಚೇತರಿಸಿಕೊಂಡು ವಿಷ್ಣುಸಹಸ್ರನಾಮುವನ್ನು ಪಠಿಸ ಹತ್ತಿತು. ಜನರೆಲ್ಲರೂ ದಂಗುಬಡಿದು ನಿಂತರು. ಆಗ ಮಹಾರಾಜರು ಜನರನ್ನು ಕುರಿತು--ಹೀಗೆ ನೀವು ಆಶ್ಚರ್ಯಪಡುವ ಕಾರಣವಿಲ್ಲ. ಇದು ನಿತ್ಯನೇಮುದ ಮಹಿಮೆಯಿರುವದು. ಈತನು ಪ್ರತಿನಿತ್ಯ ಸ್ನಾನದ ಕಾಲಕ್ಕೆ ವಿಷ್ಣುಸಹಸ್ರವನ್ನು ಜಪಿಸುವ ಪದ್ಧತಿಯಿಟ್ಟುಕೊಂಡಿದ್ದರಿಂದ ತಲೆಬುರುಡಿಗೆ ನೀರು ಬಡಿದ ಕೂಡಲೆ ನಾಮುವನ್ನು ಪಠಿಸಬೇಕೆಂಬದು ಇವನಿಗೆ ಮನದಟ್ಟಾಗಿ ಹೋಗಿದೆ. ಇದೊಂದೇ ಕ್ರಿಯೆಯನ್ನು ಪಾಲಿಸಿದ್ದರಿಂದ ಈತನು ಉದ್ಧೃತನಾದನು. ಆದ್ದರಿಂದ ನಿತ್ಯದಲ್ಲಿ ತಪ್ಪದೆ ಮಾಡುವ ಕೆಲಸದ ಮಹತ್ವವನ್ನು ಇಷ್ಟೇ ಎಂದು ಬಣ್ಣಿಸಲಿಕ್ಕೆ ಯಾರಿಂದಲೂ ಆಗದು. ಭಗವತ್ಸೇವೆಯನ್ನು ಮಾಡುವವರು ತಪ್ಪದೆ ಪ್ರತಿನಿತ್ಯದಲ್ಲೂ ಬಂದು

ನೇಮದಂತೆ ಮಾಡಬೇಕು. ಮನಸ್ಸಿಗೆ ಬಂದಾಗ ಮಾಡಿ ಮನಸ್ಸಿಗೆ ಬಾರದೆ ಇದ್ದಾಗ ಬಿಟ್ಟರೆ ಅದರಿಂದ ಭಗವಂತನ ತೃಪ್ತಿಯಾಗುವದಿಲ್ಲ. ನಿತ್ಯನೇಮದಂತೆ ಮಾಡುವವರೇ ಧನ್ಯರು! ಎಂದು ಹೇಳಿ ಆ ಶವದ ಮುಂದಿನ ವಿಧಿಗೋಸ್ಕರ ಅಪ್ಪಣೆ ಕೊಟ್ಟರು.

ಒಂದು ದಿನ ಒಬ್ಬ ಶಾಸ್ತ್ರಿಯು ಮಹಾರಾಜರಲ್ಲಿ ಕರ್ಮಠತನವು ಎಷ್ಟರ ಮಟ್ಟಿಗೆ ಇರುತ್ತದೆಂಬದನ್ನು ಪರೀಕ್ಷಿಸುವದಕ್ಕೆ ಬಂದನು. ಸರ್ವಜ್ಞರಾದ ಮಹಾರಾಜರು ಆತನು ಬರುವ ದಿವಸ ಎಲ್ಲರನ್ನೂ ಮಡಿ ಯುಡಿಸಿ ಶ್ರೀರಾಮ ಮಂದಿರದಲ್ಲಿ ಸಂಧ್ಯಾವಂದನೆಗಾಗಿ ಕೂಡ್ರಿಸಿದರು; ಮತ್ತು ತಾವೂ ಮಡಿಕಫನಿಯನ್ನು ಧರಿಸಿ ಸಂಧ್ಯಾವಂದನೆಗೆ ಕುಳಿತರು. ಹೀಗೆ ಇವರು ಸಂಧ್ಯಾವಂದನೆಗೆ ಕುಳಿತಾಗಲೇ ಶಾಸ್ತ್ರಿಯು ಬಂದನು. ನೋಡಿ ಆತನಿಗೆ ಆಶ್ಚರ್ಯವಾಯಿತು. ಶಾಸ್ತ್ರಿಯ ಯೋಗಕ್ಷೇಮವಾದ ಬಳಿಕ ಮಹಾರಾಜರು ಆ ಕೂಡಲೆ ಒಂದು ಅಭಂಗವನ್ನು ವಿರಚಿಸಿ ಅಂದರು. ಅದು ಏನಂದರೆ—

"ತಿನ್ಹಿ ಸಾಂಜವೇಳ ಝಾಲಿ । ಆತಾ ಕರಾ ಸಂಧ್ಯಾ ಭಲಿ ॥ ೧ ॥
ಶುದ್ಧ ಕರೂನಿಯಾ ಮನ । ಅಂತರಿ ಆಸನ ನಿರ್ಮಳ ॥ ೨ ॥
ಕಾಮಕ್ರೋಧಜಾಳಿ । ಭಸ್ಮಲಾವೀಹೋ ಭಾಳೀ ॥ ೩ ॥
ಭಕ್ತಿಮಾರ್ಗ ಹೃದಯಿ ಧರೀ । ವಿವೇಕಾಚೀ ಪಳೀಕರಿ ॥ ೪ ॥
ಐಸೆಕರೀ ಆಚಮನ । ಧ್ಯಾನಿ ಧರೀ ನಾರಾಯಣ ॥ ೫ ॥
ಮಾರ್ಜನ ಕರೀ ನಿತ್ಯನೇಮ । ರಾಮನಾಮಿ ಲಾವೀಮನ ॥ ೬ ॥
ಪ್ರಾಣಾಯಾಮ ಸಾಧೀ । ಭೂತದಯಾ ಠೇವೀ ಆಧೀ ॥ ೭ ॥
ಐಸೆ ಸಂಧ್ಯೇಚೆ ಪ್ರಥಮ ಅಂಗ । ಪುಢೆ ಕರ್ಮಹೋಯ ಚಾಂಗ ॥ ೮ ॥
ನ್ಯಾಸ ಮುದ್ರಾ ಕರೀ । ಸಂಧ್ಯಾಶತ್ರು ದೂರಧರೀ ॥ ೯ ॥
ತೃಷ್ಣಾ ವಾಸನಾ ಅಹಂಕಾರ । ಅರ್ಘ್ಯದ್ಯಾವೇ ಬರೋಬರಿ ॥ ೧೦ ॥
ಸಮದೃಷ್ಟಿ ರೂಪ ನ್ಯಾಹಾಳಿ । ಸಮದೃಷ್ಟಿ ರೂಪ ನ್ಯಾಹಾಳಿ ॥ ೧೧ ॥

ದಾಸವಿಷ್ಣು ಣಿ ಬ್ರಾಹ್ಮಣಶಿರೋಮಣಿ|ಸಂಧ್ಯಾ ಕರಿತಿ ಮಹಾಮುನಿ|೧೨||

ತಾತ್ಪರ್ಯ:—ಸಾಯಂಕಾಲದ ವೇಳೆಯಾಯಿತು. ಸಂಧ್ಯಾವಂದನೆಯನ್ನು ಮಾಡಿರಿ. ಮನಸ್ಸನ್ನು ಶುದ್ಧಮಾಡಿ ನಿರ್ಮಲರಾಗಿರಿ. ಕಾಮ ಕ್ರೋಧವನ್ನು ಸುಟ್ಟು, ಭಸ್ಮಮಾಡಿ ಹಣೆಯಲ್ಲಿ ಧರಿಸಿರಿ. ಭಕ್ತಿಮಾರ್ಗ ವನ್ನು ಹೃದಯದಲ್ಲಿ ಧಾರಣಮಾಡಿ, ವಿವೇಕವೆಂಬದನ್ನು ತೀರ್ಥದ ಸವ್ರಟ ನ್ನಾಗಿ ಮಾಡಿರಿ. ಅದರಿಂದ ಆಚಮನ ಮಾಡಿ ನಾರಾಯಣನ ಧ್ಯಾನವನ್ನು ಮಾಡಿರಿ. ನಿತ್ಯ ನೇಮರೂಪವಾದ ಮಾರ್ಜನದಿಂದ ಮನಸ್ಸನ್ನು ರಾಮ ಧ್ಯಾನದಲ್ಲಿ ತೊಡಗಿಸಿರಿ. ಪ್ರಾಣಾಯಾಮವನ್ನು ಸಾಧಿಸಿ, ಭೂತದಯಾ ಪರರಾಗಿರಿ. ನ್ಯಾಸಮುದ್ರೆಗಳನ್ನು ಮಾಡಿ ದುರ್ಗಣಗಳನ್ನು ಹೊಡೆದೋ ಡಿಸಿರಿ. ತೃಷ್ಣಾ-ವಾಸನಾ-ಅಹಂಕಾರಗಳನ್ನು ಅರ್ಘ್ಯದ ಸಂಗಡ ಬಿಟ್ಟು ಬಿಡಿರಿ. ಸಮತ್ವವನ್ನು ದೊರಕಿಸಿ, ಉಪಾಸನಾ ಮೂರ್ತಿಯನ್ನೇ ಎಲ್ಲ ಕಡೆಗೂ ನೋಡಿರಿ. ಈ ಪ್ರಕಾರ ಸಂಧ್ಯಾವಂದನೆ ಮಾಡುವವರೇ ಬ್ರಾಹ್ಮ ಣೋತ್ತಮರು.

ಈ ಮೇರೆಗೆ ಮಹಾರಾಜರಿಂದ ಅಭಂಗವನ್ನು ಕೇಳಿ, ಶಾಸ್ತ್ರಿಗಳು ಮನದಲ್ಲಿಯೇ ಪಶ್ಚಾತ್ತಾಪಯುಕ್ತರಾದರು. ಜ್ಞಾನಿಗಳಿಗೇ ಕರ್ಮದ ರಹಸ್ಯವು ತಿಳಿದಿರುವದಲ್ಲದೆ, ನಮ್ಮಂಥವರಿಗೆ ತಿಳಿಯದೆಂದು ಅವರು ಮಹಾ ರಾಜರಿಗೆ ಶರಣುಹೋದರು. ಆಗ ಮಹಾರಾಜರು ಅವರನ್ನು ಶ್ರೀರಾಮ ಭಜನೆಗೆ ಹಚ್ಚಿದರು.

ಹೀಗೆ ಮಹಾರಾಜರು ಒಂದೊಂದು ನಿಮಿತ್ತದಿಂದ ಭಕ್ತರಿಗೆ ಮಹತ್ವದ ಬೋಧವನ್ನು ಮಾಡುತ್ತಿದ್ದರು. ಪ್ರಾಪಂಚಿಕರು ಆಚರಿಸ ಬಹುದಾದ ನಿತ್ಯಪದ್ಧತಿಯನ್ನು ಅವರು ಬಹು ಸರಸಾಗಿ ಉಪದೇಶಿಸಿರು ವರು. ಅವುಗಳಲ್ಲಿ ಕೆಲವನ್ನು ನಮ್ಮ ವಾಚಕರಿಗಾಗಿ ಇಲ್ಲಿ ಕೊಡುವೆವು. ಮಹಾರಾಜರ ಈ ಉಪದೇಶದಂತೆ ನಡೆಯುವವರು ಸಹಜವಾಗಿ ಕೃತಾ ರ್ಥರಾಗುವರು.

ಮನುಷ್ಯನು ಪ್ರತಿನಿತ್ಯ ಬೆಳಗಿನ ನಾಲ್ಕು ಗಂಟೆಗೆ ಏಳಬೇಕು. ಭೂಮಾತೆಯನ್ನು ನಮಸ್ಕರಿಸಿ, ಕುಲಸ್ವಾಮಿಯನ್ನು ಚಿಂತಿಸಬೇಕು. ಬಳಿಕ ಪ್ರಾತಃಸ್ಮರಣೀಯರಾದ ಭಗವದ್ಭಕ್ತರ ಗುಣಾನುವಾದವನ್ನು ಮಾಡಿ ಶೌಚ ಮುಖಮಾರ್ಜನಾದಿ ವಿಧಿಗಳನ್ನು ತೀರಿಸಬೇಕು. ಬಳಿಕ ಸ್ನಾನ ಮಾಡಿ ಪ್ರಾಣಾಯಾಮವನ್ನು ಸಾಧಿಸಿ ಸಂಧ್ಯಾವಂದನೆಯನ್ನಾಚರಿಸಿ, ಸೂರ್ಯನಾರಾಯಣನಿಗೆ ಅರ್ಘ್ಯ ಕೊಡಬೇಕು. ಬಳಿಕ ಗಾಯತ್ರೀಜಪ ವನ್ನು ಅಷ್ಟೋತ್ತರವಾದರೂ ಮಾಡಬೇಕು. ಅನಂತರ ದೇವಪೂಜೆಯನ್ನು ಮನಸ್ಸುಗೊಟ್ಟು ಮಾಡಬೇಕು. ಪೂಜೆ ನಡೆದ ಕಾಲದಲ್ಲಿ ಚಿತ್ತವನ್ನು ಚಂಚಲವಾಗಗೊಡಬಾರದು. ಕೇವಲ ಭಗವಚ್ಚರಣಗಳಲ್ಲಿಯೇ ಲಕ್ಷ ವನ್ನಿಡಬೇಕು. ಯಥಾವಿಧಿಯಾಗಿ ಪೂಜೆಯನ್ನು ಮುಗಿಸಿದ ಬಳಿಕ ಧೂಪ-ದೀಪ-ನೈವೇದ್ಯಾದಿಗಳನ್ನು ಸಮರ್ಪಿಸಬೇಕು. ಬಳಿಕ ಮಾನಸಪೂಜೆ ಯನ್ನು ಮಾಡಿ, ಸೂರ್ಯನಮಸ್ಕಾರಗಳನ್ನು ಹಾಕಬೇಕು. ಸೂರ್ಯ ನಮಸ್ಕಾರದಿಂದ ಆಯುಷ್ಯ-ಬಲ-ತೇಜಸ್ಸುಗಳು ಹೆಚ್ಚುವವು. ಬಳಿಕ ದೇವತೀರ್ಥವನ್ನು ಪ್ರಾಶನಮಾಡಿ, ಸಾಂಸಾರಿಕ ಉದ್ಯೋಗಗಳನ್ನು ನೋಡಬೇಕು. ಮನುಷ್ಯನು ನ್ಯಾಯದಿಂದ ವಿತ್ತಾರ್ಜನೆಮಾಡಬೇಕು. ಅಧರ್ಮದ ಸಂಪಾದನೆಯ ಕಡೆಗೆ ಕಣ್ಣೆತ್ತಿ ಸಹ ನೋಡಬಾರದು. ಕೃಷಿ ವಾಣಿಜ್ಯ ಮೊದಲಾದವುಗಳನ್ನು ನಡಿಸಿ, ಯೋಗ್ಯ ರೀತಿಯಿಂದ ಅರ್ಥಾ ರ್ಜನೆ ಮಾಡಬೇಕು. ಹೆಂಡರು-ಮಕ್ಕಳನ್ನು ಪ್ರೇಮದಿಂದ ಸಂರಕ್ಷಿಸ ಬೇಕು. ತಾಯಿ-ತಂದೆಗಳನ್ನು ಎಂದೂ ತಿರಸ್ಕರಿಸಬಾರದು. ಉತ್ತಮ ರೀತಿಯಿಂದ ಅವರ ಸೇವೆಯನ್ನು ಮಾಡಬೇಕು. ಮಾತಾ-ಪಿತೃಗಳ ಸೇವೆ ಯನ್ನು ಮಾಡಿ, ಅವರ ಆಶೀರ್ವಾದ ಸಂಪಾದಿಸಿದ ಮನುಷ್ಯನು ಅಕ್ಷಯ್ಯ ಸುಖವನ್ನು ಹೊಂದುವನು. ಮಧ್ಯಾಹ್ನದ ಊಟಮಾಡಿದ ಬಳಿಕ ಮನು ಷ್ಯನು ವೃಥಾ ಕಾಲಹರಣ ಮಾಡಬಾರದು, ಯಾವದೊಂದು ಪುರಾಣ ವನ್ನಾಗಲಿ, ಶ್ರೀ ದಾಸಬೋಧ ಮೊದಲಾದ ಪವಿತ್ರ-ಜ್ಞಾನವರ್ಧಕ ಗ್ರಂಥ

ಗಳನ್ನಾಗಲಿ ಮನನ ಮಾಡಬೇಕು. ಕೆಲ ಹೊತ್ತು ಮನನ ಮಾಡಿದ ಬಳಿಕ ಅರ್ಥಾರ್ಜನೆಯ ಉದ್ಯೋಗಕ್ಕೆ ತೊಡಗಬೇಕು. ಸಂಜೆಯುಮುಂದೆ ಸಂಧ್ಯಾದಿಗಳನ್ನು ಮಾಡಿ ಪಂಚಪದಿ ಮೊದಲಾದ ಅಭಂಗಗಳನ್ನು ಅಂದು ಅಂತಃಕರಣಪೂರ್ವಕವಾಗಿ ಪರಮಾತ್ಮನನ್ನು ಭಜಿಸಬೇಕು. ಬಳಿಕ ಉಪಾಸ್ಯ ದೈವತಕ್ಕೆ ಮಂಗಲಾರತಿಯನ್ನು ಮಾಡಿ ಭೋಜನವನ್ನು ಮಾಡ ಬೇಕು. ಬಳಿಕ ಉಪಾಸ್ಯ ದೈವತವನ್ನು ಸ್ಮರಿಸಿ, ಇಡೀ ದಿವಸದಲ್ಲಿ ಆಚ ರಿಸಿದ ಸಂಗತಿಗಳನ್ನು ಸ್ಮರಿಸಿ, ಭಗವಂತನಿಗೆ ಅರ್ಪಿಸಬೇಕು. ಅನಂತರ ನಿಶ್ಚಿಂತ ಮನಸ್ಕನಾಗಿ ಭಗವನ್ನಾಮವನ್ನುಚ್ಚರಿಸುತ್ತ ಮಲಗಿಕೊಳ್ಳಬೇಕು.

ಮನುಷ್ಯನ ಆಚರಣೆಯು ಯಾವಾಗಲೂ ಶುದ್ಧವಾಗಿರಬೇಕು. ಪರಸ್ತ್ರೀ ಪರದ್ರವ್ಯಗಳನ್ನು ಪಾಪಬುದ್ಧಿಯಿಂದ ನೋಡಬಾರದು. ವಿಷಯ ವಾಸನೆಯು ಬಹಳ ಕೆಟ್ಟದು. ಅದು ಬಹು ಜನರನ್ನು ಮಣ್ಣುಮುಕ್ಕಿ ಸುವದು, ಆದ್ದರಿಂದ ವಿವೇಕಿಯಾದವನು ಪರಸ್ತ್ರೀ-ಪರದ್ರವ್ಯಗಳಿಂದ ದೂರ ಇರಬೇಕು. ಪರರನ್ನು ದೂಷಿಸೋಣ, ಪರರ ಮನೆ ಮುರಿಯು ಲಿಕ್ಕೆ ಪ್ರಯತ್ನ ಮಾಡೋಣ ಇವು ಸರ್ವಥಾ ತ್ಯಾಜ್ಯವಾದವುಗಳೆಂದು ತಿಳಿಯಬೇಕು. ಪರವಂಚಕ ಬುದ್ಧಿಯುಳ್ಳವನು ಯಾವ ಪುಣ್ಯ ಕ್ಷೇತ್ರ ಗಳಿಗೆ ಹೋದರೂ, ಎಷ್ಟು ಸದಾಚಾರಿಯಾಗಿ ನಡೆದರೂ ವ್ಯರ್ಥವೆಂದು ತಿಳಿಯಬೇಕು. ಈ ಮೇರೆಗೆ ಯಾವನು ಆಚರಿಸುವನೋ, ಅವನು ಸಹಜ ವಾಗಿ ಭವಸಾಗರದಿಂದ ಪಾರಾಗುವನು.

---

## ೨೪ನೆಯ ಅಧ್ಯಾಯ—ಕೊನೆಯ ವೃತ್ತಾಂತ.



ಹೀಗೆ ಬ್ರಹ್ಮಚೈತನ್ಯ ಮಹಾರಾಜರವರು ಭಕ್ತರಿಗೆ ಸದುಪದೇಶ ವನ್ನು ಮಾಡುತ್ತ ಹಲವು ಲೀಲೆಗಳನ್ನು ತೋರಿಸಿ ಅವರಲ್ಲಿ ವಿಶ್ವಾಸವನ್ನು ಹುಟ್ಟಿಸುತ್ತ ೬೮ ವರುಷಗಳನ್ನು ಕಳೆದರು. ಆಗ ಅವರು ಮನಸ್ಸಿನಲ್ಲಿ—

"ನಾನು ಅವತರಿಸಿ ಬಹುದಿವಸಗಳಾದವು. ನಿಜ ಭಕ್ತರು ಉದ್ಧೃತರಾದರು. ನನ್ನ ಅವತಾರ ಕಾರ್ಯವು ಮುಗಿದಂತಾಯಿತು. ಇನ್ನು ಮುಂದೆ ಗುಪ್ತವಾಗುವದು ಯೋಗ್ಯವು." ಎಂದು ಯೋಚಿಸಿ, ಭಕ್ತರನ್ನು ಕುರಿತು ನುಡಿದರೇನಂದರೆ—ಭಕ್ತಶ್ರೇಷ್ಠರೇ, ಕಲಿಮಹಿಮೆಯು ಬೆಳೆಯಿತು. ಇನ್ನು ಮುಂದೆ ಸಜ್ಜನರು ದುರ್ಲಭರಾಗುವರು; ಕಾಲವು ಕಠಿಣವಾಗುವದು. ಬಹುತರವಾಗಿ ಎಲ್ಲ ಸಜ್ಜನರು ಗುಪ್ತರಾಗುವರು. ನೀವು ಮಾತ್ರ ಧೈರ್ಯಬಿಡದೆ ಶ್ರೀರಾಮನನ್ನು ಸ್ಮರಿಸುತ್ತಲಿರಬೇಕು. ನಿಜ ಭಕ್ತರನ್ನು ಶ್ರೀರಾಮನು ತಪ್ಪದೆ ಸಂರಕ್ಷಿಸುವನು ಆದ್ದರಿಂದ ಶ್ರೀರಾಮನ ನಿಜಭಕ್ತರಾಗಿರಿ. ದುರ್ಗುಣಗಳನ್ನು ಹೊರದೂಡಿರಿ; ಸದಾಚಾರಸಂಪನ್ನರಾಗಿರಿ; ವಿಷಯ ಸುಖಕ್ಕೆ ಮರುಳಾಗಿ ಅಲ್ಲದ ಕೆಲಸಗಳನ್ನು ಮಾಡಬೇಡಿರಿ. ಈ ನಮ್ಮ ಉಪದೇಶದಂತೆ ನಡೆಯುವವರಿಗೆ ಇಹಪರಗಳಲ್ಲಿ ಸುಖವಾಗುವದು. ನಡೆಯದವರು ಕಷ್ಟಕ್ಕೊಳಗಾಗುವರು.

ಈ ಮೇರೆಗೆ ಮಹಾರಾಜರು ಉಪದೇಶಮಾಡಿದರೂ ಜನರಿಗೆ ನಿಜವಾದ ರಹಸ್ಯವು ಗೊತ್ತಾಗಲಿಲ್ಲ. ಪ್ರತಿನಿತ್ಯ ಬೋಧಿಸುವಂತೆ ಈ ದಿನವೂ ಬೋಧಿಸಿದರೆಂದು ತಿಳಿದರು. ಮಹಾರಾಜರು ಅವತಾರ ಮುಗಿಸುವರೆಂಬ ಕಲ್ಪನೆಯು ಯಾರ ಮನಸ್ಸಿನಲ್ಲಿಯೂ ಬರಲಿಲ್ಲ. ಬಳಿಕ ಮಹಾರಾಜರು ಬ್ರಹ್ಮಾನಂದರನ್ನು ಕರೆಯಿಸಿಕೊಂಡು ಎಲ್ಲ ಪರಿವಾರದೊಡನೆ ಪಂಢರಪುರಕ್ಕೆ ಹೋದರು. ಅಲ್ಲಿ ಆರು ತಿಂಗಳವರೆಗೆ ಇದ್ದು, ಲಕ್ಷಗಣಿತವಾಗಿ ಬ್ರಾಹ್ಮಣ ಸಂತರ್ಪಣೆಯನ್ನು ಮಾಡಿದರು. ಒಂದು ದಿನ ಅವರು ಏಕಾಂತದಲ್ಲಿ ಕುಳಿತಾಗ—ಬ್ರಹ್ಮಾನಂದಾ, ನನ್ನ ವಿಯೋಗವು ನಿನಗೆ ಸಹನವಾಗುವದೇ? ಎಂದು ಕೇಳಿದರು. ಅದಕ್ಕೆ ಬ್ರಹ್ಮಾನಂದರು "ಆಗಲಿಕ್ಕಿಲ್ಲ" ಎಂದು ಉತ್ತರಕೊಟ್ಟರು. ಬಳಿಕ ಮಹಾರಾಜರು ಮುಗುಳು ನಗೆನಕ್ಕು ಹೇಳತಕ್ಕದ್ದನ್ನೆಲ್ಲ ಹೇಳಿ, ನೀನು ಇನ್ನು ಮುಂದೆ ಬೇಗನೆ ಕರ್ನಾಟಕಕ್ಕೆ ಹೋಗು ಎಂದು ಆಜ್ಞಾಪಿಸಿದರು.

ಗುರ್ವಾಜ್ಞೆಯಂತೆ ಬ್ರಹ್ಮಾನಂದರು ಕರ್ನಾಟಕಕ್ಕೆ ಹೋದರು. ಬಳಿಕ ಮಹಾರಾಜರು ಪಾಂಡುರಂಗನ ದರ್ಶನತಕ್ಕೊಂಡು ಪರಿವಾರದೊಡನೆ ಗೋಂದಾವಲಿಗೆ ಬಂದರು. ಮುಂದೆ ಒಂದು ತಿಂಗಳು ಕ್ರಮಿಸಿದ ಬಳಿಕ ತಮ್ಮ ಆಸ್ತಿಯನ್ನೆಲ್ಲ ಮೂರು ಪಾಲುಮಾಡಿ ಮೂರು ಮಂದಿರ ಗಳಿಗೂ ಮೃತ್ಯುಪತ್ರವನ್ನು ಬರೆದಿಟ್ಟು ವ್ಯವಸ್ಥೆಗಾಗಿ ಪಂಚರನ್ನು ನೇಮಿ ಸಿದರು; ಮತ್ತು ಮಂದಿರಗಳಿಗೆ ಯೋಗ್ಯ ಅರ್ಚಕರನ್ನು ನೇಮಿಸಿದರು. ಆಗಲೂ ಜನರಿಗೆ ತಿಳಿಯಲಿಲ್ಲ. ಬಳಿಕ ಮಹಾರಾಜರು ಒಂದು ದಿನ ಭಕ್ತರನ್ನು ಕರೆದು—"ನಾನು ಇನ್ನು ಸ್ವಲ್ಪ ದಿನಗಳಲ್ಲಿ ನೈಮಿಷಾರಣ್ಯಕ್ಕೆ ಹೋಗಬೇಕಾಗಿದೆ. ಅಲ್ಲಿಗೆ ಹೋಗದಿದ್ದರೆ ಈ ಸ್ಥಳವನ್ನೇ ನೈಮಿಷಾರ ಣ್ಯವಾಗಮಾಡುವೆನು ಎಂದು ನುಡಿದರು.

ಆಗ ಮಾತ್ರ ಜನರಿಗೆ ಮಹಾರಾಜರು ದೇಹ ಬಿಡುವರೆಂದು ಸಂಶಯ ಬಂದಿತು. ಅಷ್ಟರಲ್ಲಿ ಮಹಾರಾಜರಿಗೆ ದಮ್ಮು ಹೆಚ್ಚಾಯಿತು. ದೂರ ದೂರಿನ ಜನರು ಬಂದು ದರ್ಶನ ತೆಗೆದುಕೊಂಡು ಹೋಗ ಹತ್ತಿ ದರು. ಆಗ ಮಹಾರಾಜರು ತಮ್ಮ ನಿರ್ಯಾಣ ಕಾಲದಲ್ಲಿ ಬಹುಜನರು ಬಳಿಯಲ್ಲಿರುವದು ಉಚಿತವಲ್ಲೆಂದೆಣಿಸಿ ಸೇವೆಗೆ ಬಂದು ನಿಂತವರಲ್ಲಿ ಬಹುಜನರನ್ನು ಅವರವರ ಊರಿಗೆ ಕಳಿಸಿಕೊಟ್ಟರು. ನಿರ್ಯಾಣಕ್ಕೆ ಮೂರು ದಿನಗಳು ಇರುವಾಗ ಗೋಶಾಲೆಯನ್ನು ನೋಡ ಹೋದರು. ಮತ್ತು ಅಲ್ಲಿ ಅರಾಮಖುರ್ಚಿಯ ಮೇಲೆ ಕುಳಿತು ಅಹಾ! ಈ ಸ್ಥಳವು ಎಷ್ಟು ಮನೋಹರವಾಗಿದೆ! ಈ ಸ್ಥಳವನ್ನು ಬಿಟ್ಟು ಹೋಗುವದಕ್ಕೆ ಮನಸ್ಸೇ ಆಗಲೊಲ್ಲದು. ನಾಳೆಲ್ಲ ನಾಡದು ಮುಂಜಾನೆ ಇಲ್ಲಿಯೇ ಇರ ಲಿಕ್ಕೆ ಬರುವೆನು ಎಂದು ನುಡಿದರು. ಮತ್ತು ಶಿಷ್ಯರನ್ನು ಕುರಿತು— ಈ ಖುರ್ಚಿಯನ್ನು ಇಲ್ಲಿಯೇ ಇಟ್ಟು ಇದನ್ನು ಕಾಯಿರಿ. ಎಂದು ಹೇಳಿ ಆಕಳುಗಳ ಮೇಲೆ ಕೈಯಾಡಿಸಿ ಮಂದಿರಕ್ಕೆ ಹೋದರು. ಆ ದಿನ ರಾತ್ರಿ ಯಲ್ಲಿ ಅವರಿಗೆ ಕಫದ ಪ್ರಕೋಪವು ವಿಶೇಷವಾಯಿತು. ಜ್ಯೋತಿಷ್ಕರನ್ನು

ಕರೆಯಿಸಿ ತಿಥಿ ವಾರ ನಕ್ಷತ್ರ ಅಯನ ಮೊದಲಾದವುಗಳನ್ನು ಕೇಳಿಕೊಂಡರು. ಬೆಳಗು ಮುಂಜಾನೆ ಕಫವು ಸ್ವಲ್ಪ ಶಾಂತವಾಯಿತು. ಆಗ ಮಹಾರಾಜರು ಎದ್ದು ಹಾಸಿಗೆಯ ಮೇಲೆ ಕುಳಿತು—ಎಲ್ಲಾ ಭಕ್ತರನ್ನುದ್ದೇಶಿಸಿ—ನನಗೆ ಆನಂದದಿಂದ ಅಪ್ಪಣೆ ಕೊಡಿರಿ. ನನ್ನ ಗುರುರೂಪವು ಸರ್ವತ್ರದಲ್ಲಿ ವ್ಯಾಪಿಸಿರುವದು. ಈ ಅಸ್ಥಿ-ಚರ್ಮ-ಮಾಂಸಮಯವಾದ ದೇಹಕ್ಕೆ ಮಾತ್ರ ಗುರುವೆಂದು ತಿಳಿಯಬೇಡಿರಿ. ದೇಹವು ನಶ್ವರವಾದದ್ದು, ಅದು ನಾಶವಾಗಲೇ ಬೇಕು. ನಾಶವಂತ ಶರೀರವನ್ನು ನಂಬಬಾರದು. ಆದ್ದರಿಂದ ನಾನು ದೇಹಬಿಟ್ಟರೆ ಯಾರೂ ಅಳಬೇಡಿರಿ. ನನ್ನ ಉಪದೇಶವನ್ನು ಲಕ್ಷದಲ್ಲಿಡಿರಿ. ಸರ್ವದಾ ರಾಮಧ್ಯಾನ ಮಾಡಿ ಮುಕ್ತರಾಗಿರಿ. ಭೂತದಯಾಪರರಾಗಿರಿ, ಸದಾಚಾರ ಸಂಪನ್ನರಾಗಿರಿ. ಪರಸ್ತ್ರೀ ಸಹೋದರರಾಗಿರಿ. ಬಹಳ ಹೇಳುವದೇನು? ಇಂದಿನವರೆಗೆ ಮಾಡಿದ ಉಪದೇಶವನ್ನೆಲ್ಲ ಲಕ್ಷದಲ್ಲಿಟ್ಟು ನಡೆಯಿರಿ. ಮಂದಿರದಲ್ಲಿರತಕ್ಕವರು ಈ ಮಂದಿರದ ವ್ಯವಸ್ಥೆಯನ್ನು ಚನ್ನಾಗಿ ಕಾಯ್ದುಕೊಂಡು ಹೋಗಿರಿ. ದೇಹವು ಅಶಾಶ್ವತವಿರುವದರಿಂದ ಅದನ್ನು ನಂಬಿ ಕೆಡಬೇಡಿರಿ. ನಿರಭಿಮಾನದಿಂದ ಶ್ರೀರಾಮನ ಸೇವೆ ಮಾಡಿರಿ. ಬಂದ ಹೋದವರ ಸತ್ಕಾರವನ್ನು ಚನ್ನಾಗಿ ಮಾಡಿರಿ. ಅನ್ನದಾನದ ಕಡೆಗೆ ವಿಶೇಷ ಲಕ್ಷವಿರಲಿ ಎಂದು ಹೇಳಿದರು. ಮಹಾರಾಜರು ಇನ್ನು ದೇಹಬಿಡುವರೆಂದು ಜನರೆಲ್ಲರೂ ದುಃಖಕ್ಕೊಳಗಾದರು. ಆಗ ಮಂದಿರದಲ್ಲಿ ಜ್ಞಾನಸಂಪನ್ನರಾದ ಶಿಷ್ಯರಾರೂ ಇದ್ದಿಲ್ಲ. ಪೂರ್ಣಜ್ಞಾನವು ಪ್ರಾಪ್ತವಾದ ಹೊರತು ದೇಹಮೋಹವು ಕಡಿಯುವದಿಲ್ಲ. ಆಗ ಅಲ್ಲಿದ್ದವರೆಲ್ಲರೂ ದೇಹಮೋಹಕ್ಕೆ ಬಿದ್ದು ವಿಯೋಗದುಃಖದಿಂದ ಬಳಲ ಹತ್ತಿದರು. ಕೆಲಸ ಮಾಡಲಿಕ್ಕೆ ಜನರ ಕೈಕಾಲುಗಳೇ ಏಳದಾದವು. ಆಗ ಭಕ್ತರೆಲ್ಲರೂ ಒಟ್ಟುಗೂಡಿ ಮಹಾರಾಜರ ಬಳಿಗೆ ಬಂದು—ಮಹಾರಾಜ, ತಾವು ಅಜ್ಞಾನಿಗಳಾದ ನಮ್ಮನ್ನು ಕೈಬಿಟ್ಟು ಹೋಗುವಿರಿ. ನಾವು ಯಾರನ್ನು ನೋಡಿ ಸಂತೋಷಪಡಬೇಕು? ಯಾರಿಗೆ

ನಮ್ಮ ದುಃಖವನ್ನು ನಿವೇದಿಸಬೇಕು? ಎಂದು ದುಃಖಿಸಲಾರಂಭಿಸಿದರು. ಆಗ ಮಹಾರಾಜರು ಎದ್ದು ಕುಳಿತು ಎಲ್ಲರನ್ನು ಸಮಾಧಾನ ಪಡಿಸಿ ನುಡಿದರೇನಂದರೆ—ನೀವು ಹೀಗೆ ಶೋಕ ಮಾಡಬಾರದು. ನಾನು ವಿದೇಹ ಸ್ಥಿತಿಯಿಂದ ಇಲ್ಲಿಯೇ ಇರುತ್ತೇನೆ! ನನ್ನ ಈ ಗಾದಿಯ ಮೇಲೆ ಕೂಡ್ರಲಿಕ್ಕೆ ಯೋಗ್ಯರಾದವರು ಯಾರೂ ಒಪ್ಪಿಕೊಳ್ಳಲಿಲ್ಲ. ಆದ್ದರಿಂದ ಈ ಗಾದಿಯನ್ನೇ ನೀವು ಪೂಜಿಸಿರಿ. ಕಾಲಾಂತರದಿಂದ ಪುನಃ ನಾನೇ ಬರುವೆನು. ಶಾಂತರಾಗಿರಿ. ಶ್ರೀರಾಮನ ಉಪಾಸನೆಯನ್ನು ಮರೆಯಬೇಡಿರಿ. ಭಕ್ತರನ್ನು ರಕ್ಷಿಸಲು ಆ ಪ್ರಭುವು ಸಮರ್ಥನಿರುವನು. ಈಗ ಬಹು ಜನರು ಹಸಿವೆಯಿಂದ ಬಳಲುತ್ತಿರುವರು. ಸಂತರ್ಪಣೆಯನ್ನು ನಡಿಸಿರಿ. ಎಲ್ಲ ರಾಮಮಂದಿರಗಳಲ್ಲಿ ರಾಮಭಜನೆಯನ್ನು ನಡಿಸಿರಿ. ನಾನು ಸ್ಥಾಪಿಸಿದ ಎಲ್ಲ ರಾಮಮಂದಿರಗಳಲ್ಲಿ ರಾಮಭಜನೆಯು ನಡೆಯುವಂತೆ ಈ ಮೊದಲೇ ಪತ್ರಬರೆಯಿಸಿರುವೆನು. ಅದರಂತೆ ನೀವೂ ಈ ಊರಲ್ಲಿ ಭಜನೆ ನಡಿಸಿರಿ''

ಈ ಮೇರೆಗೆ ಆಜ್ಞೆಮಾಡಲು ಎಲ್ಲ ಜನರೂ ಸಮಾಧಾನ ತಾಳಿ, ತಮ್ಮ ತಮ್ಮ ಕೆಲಸಗಳಲ್ಲಿ ನಿರತರಾದರು. ಭಜನೆಯ ಮೇಳದವರು ಮೂರೂ ಮಂದಿರಗಳಲ್ಲಿ ರಾಮ ಭಜನೆಯನ್ನು ನಡಿಸಿದರು. ಮರುದಿನ ಬೆಳಗಾಯಿತು. ಅಂದು ಪ್ರಮಾದೀಚ ಸಂವತ್ಸರದ ಮಾರ್ಗಶಿರ ವದ್ಯ ದಶಮಿಯಾಗಿತ್ತು. (೨೨-೧೨-೧೯೧೩) ಆ ದಿನ ಮಹಾರಾಜರು ನಸುಕಿನಲ್ಲಿಯೇ ಎದ್ದು ಕುಳಿತರು; ಮತ್ತು ಮುಖಪ್ರಕ್ಷಾಲನಾದಿಗಳನ್ನು ನೆರವೇರಿಸಿ ಶ್ರೀರಾಮನ ದರ್ಶನ ತಕ್ಕೊಂಡು ಪುನಃ ಹಾಸಿಗೆಯ ಮೇಲೆ ಬಂದು ಕುಳಿತರು. ಅವರ ಪ್ರಕೃತಿಯು ಅಶಕ್ತವಾಗಿದ್ದರೂ ಈದಿನವೇ ಅವರು ದೇಹ ಬಿಡುವರೆಂಬ ಕಲ್ಪನೆಯು ಯಾರಿಗೂ ಇದ್ದಿಲ್ಲ. ಆಗ ಮಹಾರಾಜರು ಹತ್ತರ ಇದ್ದವರನ್ನು ಕುರಿತು—ದೇಹ ಬಿಡುವದಕ್ಕೆ ಈ ತಂಪು ಹೊತ್ತು ಯೋಗ್ಯವಲ್ಲವೇ? ಎಂದು ಕೇಳಿದರು. ಆಗ ಭಕ್ತರು—ಮಹಾರಾಜ, ಹೀಗೆ ಮಾತಾಡಿದರೆ ನಮ್ಮ ಗತಿಯೇನು? ಎಂದರು.

ಇಷ್ಟು ಮಾತಾಡುವಷ್ಟರಲ್ಲಿಯೇ ಮಹಾರಾಜರಿಗೆ ಉಬ್ಬಸ ಬರತೊಡಗಿತು. ಅವರು ಪದ್ಮಾಸನಸ್ಥರಾಗಿ ಕುಳಿತುಕೊಂಡರು. ಶ್ವಾಸವು ಕೆಳಕ್ಕೊಮ್ಮೆ ಮೇಲಕ್ಕೊಮ್ಮೆ ಹೀಗೆ ಓಡಾಡಲಾರಂಭಿಸಿತು. ಜನರೆಲ್ಲರೂ ಹೌಹಾರಿ ಕುಳಿತುಕೊಂಡರು. ಕೆಲಸಾರೆ ಹೀಗೆ ಶ್ವಾಸವು ಕೆಳಗೆ ಮೇಲೆ ಆಗಿ ಒಮ್ಮೆ ಮೇಲಕ್ಕೆ ಹೋದದ್ದು ಕೆಳಗಿಳಿಯದಾಯಿತು. ಪದ್ಮಾಸನಸ್ಥವಾದ ಮಹಾರಾಜರ ಮೂರ್ತಿಯು ಹಾಗೇ ಕುಳಿತುಬಿಟ್ಟಿತ್ತು. ಮಧ್ಯಾಹ್ನದವರೆಗೆ ಜನರು ಸುಮ್ಮನೆ ನೋಡುತ್ತ ಕುಳಿತುಕೊಂಡರು. ಮಹಾರಾಜರು ಬ್ರಹ್ಮೈಕ್ಯರಾದರೆಂಬದು ಯಾರಿಗೂ ತಿಳಿಯದಾಯಿತು. ಆಗ ಕೂಡಿದವರಲ್ಲಿ ಒಬ್ಬರು ಡಾಕ್ಟರರನ್ನು ಕರೆತಂದರು. ಡಾಕ್ಟರನು ಪರೀಕ್ಷಿಸಿ, ದೇಹದಲ್ಲಿ ಜೀವವಿದ್ದಂತೆ ತೋರುವದಿಲ್ಲ. ಆದರೆ ಯೋಗಿಗಳ ಮಾತನ್ನು ಹೇಳಲಿಕ್ಕೆ ಸಾಧ್ಯವಿಲ್ಲ. ಯಾರಾದರೂ ಯೋಗಬಲ್ಲವರಿದ್ದರೆ, ಪರೀಕ್ಷಿಸಬಹುದೆಂದು ಹೇಳಿದನು. ಆ ದಿನವು ಸಂಪೂರ್ಣ ಕಳೆದುಹೋಯಿತು. ಪದ್ಮಾಸನಸ್ಥವಾದ ಮಹಾರಾಜರ ಮೂರ್ತಿಯನ್ನು ನೋಡಿ ಜನರು ಯೋಗ ಸಮಾಧಿಯನ್ನು ಹಚ್ಚಿರಬಹುದೆಂದೇ ತಿಳಿದು ಬಿಟ್ಟರು. ಮರುದಿನ ಬೆಳ್ಳಗೆ ಬೆಳಗಾಯಿತು. ಮಹಾರಾಜರು ಜಡದೇಹವನ್ನು ತ್ಯಜಿಸಿದ್ದರಿಂದ ಆ ದೇಹವು ಚೈತನ್ಯರಹಿತವಾಗಿತ್ತು. ಚೈತನ್ಯವು ಬ್ರಹ್ಮನಲ್ಲಿ ಐಕ್ಯವಾದ್ದರಿಂದ ದೇಹಕ್ಕೆ ಕಲೇವರತ್ವವು ಪ್ರಾಪ್ತವಾಯಿತು. ಮಹಾರಾಜರು ದೇಹಬಿಟ್ಟು ೨೪ ತಾಸುಗಳು ಗತಿಸಿಹೋದ್ದರಿಂದ ಆ ದೇಹವು ಮರುದಿನ ವಿದ್ರೂಪವಾಯಿತು. ಆಗ ಭಕ್ತಜನರು ನಿರಾಶೆಗೊಂಡು ಊರ ಹೊರಗಿನ ಗೋಶಾಲೆಯ ಪಟಾಂಗಣದಲ್ಲಿ ದಹನವಿಧಿಯನ್ನು ನೆರವೇರಿಸಿದರು. ಭಕ್ತರಿಗೆ ಅಪಾರವಾದ ದುಃಖವಾಯಿತು. ಪಂಚ ಮಹಾಭೂತಗಳಿಂದ ನಿರ್ಮಿತವಾದ ಮಹಾರಾಜರ ದೇಹವು ಪಂಚ ಮಹಾಭೂತಗಳಲ್ಲಿ ಬೆರೆತುಹೋಯಿತು. ದರ್ಶನಕ್ಕೆ ಬಂದವರೆಲ್ಲ ಉದಾಸ ಭಾವವನ್ನು ತಾಳಿದರು.

---

## ೨೫ನೆಯ ಅಧ್ಯಾಯ—ಪಾದುಕಾಪೂಜೆ.

ಮಹಾರಾಜರು ಬ್ರಹ್ಮೈಕ್ಯರಾದ ಬಳಿಕ ಅವರ ಔರ್ಧ್ವದೇಹಿಕ ಕಾರ್ಯಗಳು ಯಥಾಸಾಂಗವಾಗಿ ಜರುಗಿದವು. ಭಕ್ತರು ಮಹಾರಾಜರನ್ನು ಸಂಸ್ಕರಿಸಿದ ಸ್ಥಳದಲ್ಲಿ ಒಂದು ಕಟ್ಟೆಯನ್ನು ಕಟ್ಟಿ ಅದರ ಮೇಲೆ ಪಾದುಕೆಗಳನ್ನಿಟ್ಟು ನಿರ್ಗುಣರೂಪದಿಂದಿರುವ ಮಹಾರಾಜರನ್ನು ಪೂಜಿಸಲಾರಂಭಿಸಿದರು. ಆಗ ಭಕ್ತರಿಗೆ ಗೋಂದಾವಲಿಯು ನೈಮಿಷಾರಣ್ಯದಂತೆ ಭಾಸವಾಗಹತ್ತಿತು. ಸರ್ವರಿಗೂ ಚೈತನ್ಯಸ್ವರೂಪರಾದ ಮಹಾರಾಜರು ಗುಪ್ತರಾದ್ದರಿಂದ ಚೈತನ್ಯಶೂನ್ಯವಾದ ಆ ಸ್ಥಳವು ಅರಣ್ಯಧರ್ಮವನ್ನು ವ್ಯಕ್ತಗೊಳಿಸಿತು. ಮುಂದೆ ಸ್ವಲ್ಪ ದಿವಸಗಳಲ್ಲಿಯೇ ಅಂದರೆ ಶ್ರೀರಾಮನವಮಿಯ ಮಹೋತ್ಸವಕ್ಕೆ ಬ್ರಹ್ಮಾನಂದರು ಗೋಂದಾವಲಿಗೆ ದಯಮಾಡಿಸಿದರು. ಮಹಾರಾಜರಿಂದ ದಿವ್ಯತೇಜಸ್ಸನ್ನು ಪಡೆದ ಬ್ರಹ್ಮಾನಂದರನ್ನು ನೋಡಿ ಗೋಂದಾವಲಿ ನಿವಾಸಿಗಳಿಗೂ ಮಂದಿರವಾಸಿಗಳಿಗೂ ತುಂಬಾ ಸಂತೋಷವಾಯಿತು. ಉತ್ಸವವು ಬಹು ಆನಂದಕರವಾಗಿ ಸಾಂಗವಾಯಿತು. ಆಗ ಗೋಂದಾವಲಿಗೆ ಪುನಃ ಕಳೆ ಬಂದಿತು. ಭಕ್ತರ ಹೃದಯದಲ್ಲಿ ಮಹಾರಾಜರು ವಾಸಮಾಡಿದ್ದರಿಂದ ಜನರಿಗೆ ಎಲ್ಲಿ ನೋಡಿದಲ್ಲಿ ಆನಂದವೇ ಕಾಣಬರತೊಡಗಿತು. ಬಳಿಕ ದಶಮಿಯ ದಿವಸ ಮಹಾರಾಜರ ಸಮಾಧಿಯು ಕಟ್ಟಡದ ಮುಹೂರ್ತವಾಗಿ ಒಂದು ವರುಷದೊಳಗೇ ಸಮಾಧಿಯ ಕೆಲಸವು ಮುಗಿಯಬೇಕೆಂದು ಮಹಾರಾಜರ ಭಕ್ತರಾದ ಪಂಢರಪುರದ ಅಪ್ಪಾಸಾಹೇಬ ಭಡಗಾಂವಕರ ಎಂಬವರಿಗೆ ಬ್ರಹ್ಮಾನಂದರು ಅಪ್ಪಣೆ ಮಾಡಿದರು. ಅಪ್ಪಾಸಾಹೇಬರು ಸರ್ವಾಂಗಸುಂದರವಾದ ಸಮಾಧಿಯನ್ನು ಮಹಾರಾಜರ ಆರಾಧನೆಯ ಒಳಗಾಗಿಯೇ ಸಿದ್ಧಪಡಿಸಿದರು.

ಈ ಸಮಾಧಿಯ ಮೇಲೆ ಪಾದುಕೆಗಳನ್ನು ಸ್ಥಾಪಿಸಿ ಭಕ್ತರ ಉಪಾಸನೆಗೆ ಮಾರ್ಗಮಾಡಿಕೊಡಬೇಕೆಂದು ಬ್ರಹ್ಮಾನಂದರು ಇಚ್ಛಿಸಿದರು. ಇದು ಮಹಾರಾಜರ ಸಂಕಲ್ಪವೆಂದೇ ಹೇಳಬಹುದು. ಯಾಕಂದರೆ ಹಿಂದಕ್ಕೆ ಮಹಾರಾಜರು ಕುರ್ತಕೋಟಿಗೆ ಹೋದಾಗ ಅಲ್ಲಿಯೊಬ್ಬ ಕುಶಲ ಶಿಲ್ಪಿಯು ಅವರಿಗೆ ಒಂದು ಸುಂದರವಾದ ಮಾರುತಿಯ ಮೂರ್ತಿಯನ್ನು ಮಾಡಿಕೊಟ್ಟಿದ್ದಲ್ಲದೆ ಆ ಊರಿನಲ್ಲಿ ಸ್ಥಾಪಿಸುವದಕ್ಕೆ ಸುಂದರ ಕಲ್ಲಿನಲ್ಲಿ ಪಾದುಕೆಗಳನ್ನೂ ಹೊಡೆದು ತಂದಿದ್ದನು. ಮಾರುತಿಯನ್ನು ಮಹಾರಾಜರು ಅಲ್ಲಿ ಸ್ಥಾಪಿಸಿ ಪಾದುಕೆಗಳನ್ನು ಸ್ಥಾಪಿಸುವ ಯೋಗವು ಇನ್ನೂ ಬಂದಿಲ್ಲ. ಇದನ್ನು ಇನ್ನೂ ೪-೫ ವರುಷಗಳ ಮೇಲೆ ಸ್ಥಾಪಿಸಬಹುದು ಎಂದು ಹೇಳಿ ಆ ಪಾದುಕೆಗಳ ಮೇಲೆ ನಿಂತು ಪೂಜೆಯನ್ನು ತಕ್ಕೊಂಡರು. ಹೀಗೆ ಮಹಾರಾಜರು ನಿಂತು ಪೂಜೆಮಾಡಿಸಿಕೊಂಡ ಆ ಪಾದುಕೆಗಳು ಕುರ್ತಕೋಟಿಯಲ್ಲಿದ್ದವು. ಮುಂದೆ ೪-೫ ವರುಷಗಳಲ್ಲಿಯೇ ಮಹಾರಾಜರು ದೇಹಬಿಟ್ಟಿದ್ದರಿಂದ ಅವರ ಸಂಕೇತದಂತೆ ಆ ಪಾದುಕೆಗಳನ್ನೇ ಗೋಂದಾವಲಿಯಲ್ಲಿಯ ಸಮಾಧಿಯ ಮೇಲೆ ಸ್ಥಾಪಿಸಬೇಕೆಂದು ನಿಶ್ಚಯಿಸಿದ್ದು ಸ್ವಾಭಾವಿಕವಾಯಿತು.

ಮಹಾರಾಜರ ಪುಣ್ಯತಿಥಿಯ ಹೊತ್ತಿಗೆ ಸರಿಯಾಗಿ ಬ್ರಹ್ಮಾನಂದರು ಸರ್ವಸನ್ನಾಹದೊಡನೆ ಪಾದುಕೆಗಳನ್ನು ತಕ್ಕೊಂಡು ಗೋಂದಾವಲಿಯನ್ನು ಮುಟ್ಟಿದರು. ಅಷ್ಟೊತ್ತಿಗೆ ಸಮಾಧಿಯೂ ಸಿದ್ಧವಾಗಿತ್ತು. ಆ ಪಾದುಕಾಸ್ಥಾಪನೆಯ ಮಹೋತ್ಸವಕ್ಕೆ ಸಮಸ್ತರೂ ಬರಬೇಕೆಂದು ಬ್ರಹ್ಮಾನಂದರು ಸಮಸ್ತ ಭಕ್ತರಿಗೂ ಆಮಂತ್ರಣ ಪತ್ರಿಕೆಗಳನ್ನು ಕಳಿಸಿದ್ದರು ಪ್ರತಿಮಹಾರಾಜರಂತಿರುವ ಬ್ರಹ್ಮಾನಂದರ ನಿಮಂತ್ರಣ ಪತ್ರಿಕೆಯನ್ನು ನೋಡಿ ಮಹಾರಾಜರ ಸಮಸ್ತ ಭಕ್ತರೂ ಗೋಂದಾವಲಿ

ಕ್ಷೇತ್ರಕ್ಕೆ ಬಂದರು. ಶಾಲಿವಾಹನ ಶಕೆ ೧೮೩೬ ಮಾರ್ಗಶಿರ ಬಹುಳ ೧ ಯ ದಿವಸ ಪಾದುಕಾಸ್ಥಾಪನೆಯಾಯಿತು. ಪ್ರತಿಪದೆಯಿಂದ ೧೦ ಯ ವರೆಗೆ ಒಳ್ಳೇ ಮಹೋತ್ಸವವು ನಡೆಯಿತು. ನಿತ್ಯ ಅನ್ನಸಂತರ್ಪಣ, ಕೀರ್ತನ-ಭಜನ ಮೊದಲಾದವುಗಳು ನಡೆಯುತ್ತಿದ್ದವು. ಮಹೋತ್ಸವವು ಅವರ್ಣನೀಯುವಾಯಿತು. ಆಗ ಬ್ರಹ್ಮಾನಂದರು ಎಲ್ಲ ಜನರನ್ನುದ್ದೇಶಿಸಿ—ಭಕ್ತರೇ, ಮಹಾರಾಜರು ನಿರ್ಗುಣರೂಪರಾದರೆಂದು ನಿರುತ್ಸಾಹ ಪಡಬೇಡಿರಿ. ಮಹಾರಾಜರು ಈಗ ಪುನಃ ಈ ಪಾದುಕಾರೂಪದಿಂದ ಹುಟ್ಟಿ ಬಂದಿರುವರು. ಒಂದು ವರುಷದ ಶಿಶುವಾಗಿರುವರು. ಗುರುಗಳು ಅವ್ಯಕ್ತಸ್ಥಿತಿಯಲ್ಲಿದ್ದರೂ ನೀರಿನಲ್ಲಿ ಲವಣವು ಅವ್ಯಕ್ತವಾಗಿರುವಂತೆ ನಿಮ್ಮ ಹೃದಯದಲ್ಲಿ ಅವರು ಅವ್ಯಕ್ತವಾಗಿ ವಾಸಿಸಿರುವರು. ಆದ್ದರಿಂದ ನಾವೆಲ್ಲರೂ ಪೂರ್ಣ ಸಮಾಧಾನ ತಾಳಿ ಮಹಾರಾಜರು ತೋರಿಸಿಕೊಟ್ಟ ದಾರಿಯಂತೆ ನಡೆದು ಉದ್ಧೃತರಾಗೋಣ; ಸದಾಚಾರಸಂಪನ್ನರಾಗೋಣ, ಭೂತದಯಾಪರರಾಗೋಣ, ಮಹಾರಾಜರು ಇದನ್ನೇ ನಮಗೆ ಹೇಳುತ್ತಿದ್ದರಲ್ಲವೆ? ಅವರು ಹೇಳಿದಂತೆ ರಾಮನ ಉಪಾಸನೆ ಮಾಡಬೇಕು. ಗೋರಕ್ಷಣ ಮಾಡಬೇಕು. ಯಥಾಶಕ್ತಿ ಅನ್ನದಾನ ಮಾಡಬೇಕು. ಪ್ರತಿವರುಷವೂ ಈ ರೀತಿ ಈ ಪುಣ್ಯಕ್ಷೇತ್ರದಲ್ಲಿ ಬಂದು ಹೀಗೆ ಮಹಾರಾಜರ ಪುಣ್ಯತಿಥಿಯನ್ನು ಮಹೋತ್ಸವದಿಂದ ಜರುಗಿಸಬೇಕು ಎಂದು ಉಪದೇಶ ಮಾಡಿದರು.

ಈ ಮೇರೆಗೆ ಪಾದುಕಾ ಸ್ಥಾಪನೆಯ ಮಹೋತ್ಸವವನ್ನು ನೆರವೇರಿಸಿ ಭಕ್ತರೆಲ್ಲರೂ ತಮ್ಮ ತಮ್ಮ ಊರುಗಳಿಗೆ ತೆರಳಿದರು. ಬ್ರಹ್ಮಾನಂದರೂ ಕರ್ನಾಟಕಕ್ಕೆ ನಡೆದರು.

ಮುಂದೆ ಈ ಸಮಾಧಿಯ ಮೇಲೆ ಶಕೆ ೧೮೪೨ರಲ್ಲಿ ಮಹಾಭಾಗವತರು (ಕರವೀರಪೀಠಸ್ಥ ಶಂಕರಾಚಾರ್ಯರಾಗಿರುವರು) ಮುರಲೀಧರನ ಮೂರ್ತಿಯನ್ನು ಸ್ಥಾಪಿಸಿದರು. ಈಗಲೂ ಭಕ್ತರು ಪಾದುಕಾ

ಪೂಜೆಯನ್ನು ಯಥಾಸಾಂಗವಾಗಿ ಜರುಗಿಸುತ್ತಿರುವರು. ಅನ್ನದಾನದ ವ್ಯವಸ್ಥೆಯು ಚನ್ನಾಗಿರುವದು. ನೂರಾರು ಗೋಗಳು ಸಂರಕ್ಷಣೆಯನ್ನು ಹೊಂದುತ್ತಿರುವವು.

ಮಹಾರಾಜರು ನಿರ್ಗುಣಸ್ಥಿತಿಯನ್ನು ಹೊಂದಿದ್ದರೂ ಸದ್ಭಕ್ತರಿಗೆ ದೃಷ್ಟಾಂತರೂಪದಿಂದ ದರ್ಶನ ಕೊಡುತ್ತ ಭಕ್ತಿಯಿಂದ ಪಾದುಕೆಗಳನ್ನು ಪೂಜಿಸಿದವರನ್ನುದ್ಧರಿಸುತ್ತಲಿರುವರು. ಸಜ್ಜನರು ಸಗುಣರೂಪದಲ್ಲಿದ್ದರೂ ಭಕ್ತರನ್ನು ಕಾಪಾಡುವರು. ನಿರ್ಗುಣಸ್ವರೂಪದಲ್ಲಿದ್ದರೂ ಭಕ್ತರನ್ನು ಕಾಪಾಡುವರು. ಇಂಥ ಮಹಾತ್ಮರ ಅಡಿದಾವರೆಗಳನ್ನು ಪಿಡಿದು ಸೇವೆಗೈಯುವವರು ಧನ್ಯರಲ್ಲವೆ?

———

ಶುಭಂಭವತು.

# ಸಂಪೂರ್ಣ.

ಆನಂದವನದ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ
ಭಿ. ಪ. ಕಾಳೆ ಇವರಿಂದ ಮುದ್ರಿಸಲ್ಪಟ್ಟಿತು. [ತಾ॥ 9-12-26

